# ನೆನಪು

"ಏನಮ್ಮಾ.......ಚೆನ್ನಾಗಿರುವೆಯ್ಯಾ?"

"................"

"ಯಾಕೋ, ಹಾಗೆ ಇದ್ದೀಯೆ? ನನ್ನ ಮರ್ತುಬಿಟ್ಯಾ?"

"ಅಲ್ಲ!........ನಿನ್ನ ಮರೆಯೋದೂ ಅಂದ್ರೆ ಹೇಗೆ ಸಾಧ್ಯ?"

"ನನ್ನ ನೋಡಿದಕೂಡ್ಲೇ ನಿನ್ನ ಮುಖ ಏಕೋ ಬಿಳಿಚಿಕೊಂಡು ಬಿಡ್ತು ........ಅದಿರಲಿ, ಏನದು ಬರೀತಿರೋದು?"

"ಹುಂ!........ಏನಿಲ್ಲ."

"ನೋಡ್ದಾ! ಮೆತ್ತಗೆ ಕೇಳಿದ್ರೆ, ಮಾತ್ನ ಹಾರಿಸ್ತಾನೆ........ಹೇಳೋ ಏನೂಂತ?"

"ಪುಸ್ತಕ....ಸಣ್ಣ ಕತೆಗಳ ಸಂಗ್ರಹ."

"ಏನೂ!........ಏನೂಂದೆ!! ಪುಸ್ತಕ? ಕತೆ ಪುಸ್ತಕ? ನೀನು ಬರೀ ತಿದ್ದೀಯಾ........ನೀ!!........ಅಹ್ಹಹ್ಹಾ!"

"................"

"ಯಾಕೋ ಬೆಪ್ಪತಕ್ಕಡಿ....ಹಾಗೆ ನೋಡ್ತೀಯಾ ನನ್ನ........ಅಲ್ಲ ನೀನು ಪುಸ್ತಕ ಬರೀತೀಯೇನೋ?"

"ಅನುವಾದ ಮಾಡಿದ್ದೇನೆ."

"ಅನುವಾದ ಮಾಡಿದ್ದೀನಿ ಅಂತಿಯಾ?"

"ಊಂ........"

"ಯಾಕೋ? ಊಟ ಮಾಡಲಿಲ್ಲವೇನೋ........ ಗಟ್ಟಿಯಾಗಿ ಮಾತಾಡೋ........ಅಲ್ಲ ಕಣೋ, ಪುಸ್ತಕ ಬರಿಯೋದು! – ಸುಲಭ ಅಂತಿದ್ದೀಯೇನೋ? ನಿನ್ನ ಕ್ವಾಲಿಫಿಕೇಷನ್ ಏನು?........ಹಾಂ?"

"ಪುಸ್ತಕ ಬರೆಯಲು ಡಿಗ್ರೀನೇ ಇರಬೇಕೂಂತ ಇಲ್ಲ ಯಾವ ಕಾನೂನು. ನಮ್ಮ ಜೀವನದಲ್ಲಿ ಆವೆಷ್ಟೋ ಘಟನೆಗಳು ನಡೆಯುತ್ತವೆ.

ಅವನ್ನು ಲೇಖನ ಸಾಮರ್ಥ್ಯವುಳ್ಳ ಪ್ರತಿಯೊಬ್ಬನೂ ಬರೆಯಬಹುದು........ ಆದರೂ ಇದು ಅನುವಾದ ಮಾತ್ರ."

"ಸರಿಯಪ್ಪಾ....ಸ್ವತಂತ್ರವಾಗಿ ಏನು ಬೇಕಾದರೂ ಬರೆಯಬಹುದು, ಅನುವಾದ ಕಷ್ಟವಲ್ಲವೇನೋ? ಮೂಲ ಲೇಖಕನ ಅರ್ಥ, ಅವನ ಮಾತಿನ ಚಾಕಚಕ್ಯತೆ, ಸ್ವಲ್ಪವೂ ಕೆಡದಂತೆ, ಬರೆಯುವುದು ಸುಲಭವೇನೋ........ ಇಲ್ಲ ಅನುವಾದ– ಗಣೇಶನ್ನ ಮಾಡಹೋಗಿ ಅವರಪ್ಪನ್ನ ಮಾಡಿದರೂಂತ ಹೇಳ್ತಾರಲ್ಲಾ ಹಾಗೇನಾದರೂ ಮಾಡಿಬಿಟ್ಟೋ."

"ಇಲ್ಲ....ಇಲ್ಲ. ಅನುವಾದ ಸುಲಭವಲ್ಲ. ನನಗೂ ತಿಳಿದಿದೆ."

"ಸರಿ....ಪುಸ್ತಕ ಏನೋ ಬರೀತಿ....ದುಡ್ಡು ಸುರಿದು ಅಚ್ಚುಹಾಕಿಸ್ತಿ. ಯಾವ ದೊಡ್ಡ ಮನುಷ್ಯ ತಕೊಂಡು ಓದ್ತಾನೆ ನೀನು ಬರೆದಿದ್ದು ಅಂದ್ರೆ...."

"ಪ್ರತಿಯೊಬ್ಬರೂ ಈ ಪುಸ್ತಕ ತೆಗೆದುಕೊಂಡು ಓದ್ತಾರೆ ಎಂಬ ನಂಬಿಕೆ ಇದೆ ನನಗೆ....ಹಾಸ್ಯಭರಿತವಾದ ಚಿಕ್ಕಚಿಕ್ಕ ಕತೆಗಳು, ನಮ್ಮಲ್ಲಿ ಕಡಿಮೆ. ಮನಸ್ಸಿಗೆ ಬೇಸರವಾದಾಗ, ಕೆಲಸಕಾರ್ಯಗಳ ನಡುವೆ ವಿರಾಮವಿರುವಾಗ, ಇದನ್ನು ಕನ್ನಡ ಸೋದರ ಸೋದರಿಯರು ಓದುತ್ತಾರೆ. ಆನಂದ ಪಡುತ್ತಾರೆ....... ಆಯಾಸ ಮರೆಯುತ್ತಾರೆ .......ಉಲ್ಲಾಸದಿಂದ ತಿಳಿನಗೆ ಸೂಸುತ್ತಾರೆ........ಸಾಕು."

"ಸಾಕೋ ಮಹರಾಯ ಸಾಕು........ನಿನ್ನ ಪುರಾಣ. ಮಾತಿಗೆ ಹೇಳ್ತೀನೆ ನೋಡು, ನೀನು ವಿದ್ವಾಂಸನಾಗಿದ್ದರೆ, ಕಾಲೇಜು ಪದವೀಧರನಾಗಿದ್ದರೆ, ಭಾರಿ ಹುದ್ದೇದಾರನಾಗಿದ್ದರೆ, ಜನ ನಿನ್ನ ಪುಸ್ತಕವನ್ನು ಕೊಂಡುಕೊಂಡು ಓದುವುದರಲ್ಲಿ ಏನೂ ಆಶ್ಚರ್ಯವಿಲ್ಲ .......ಆದರೆ ನೀನು ಈ ಮೂರರಲ್ಲಿ ಯಾವ ಗುಂಪಿಗೂ ಸೇರಿಧವನಲ್ಲ. ಹೌದೇನಯ್ಯಾ?"

"ಹೌದು........ಆದರೂ ......."

"ನೀನು ಬಾಯಿಬಿಚ್ಚಬೇಡ, ಸುಮ್ಮನೆ ಕೇಳಲಿಲ್ಲ........ಇಲ್ಲ, ನೀನು ದೊಡ್ಡ ಬರೆಹಗಾರನೆಂದು ಹೆಸರಾದರೂ ಗಳಿಸಿರಬೇಕು."

"ಗಳಿಸಬೇಕು........ಗಳಿಸ್ತೇನೆ ದೇವರ ದಯೆಯಿದ್ದರೆ........"

"ಗಳಿಸ್ತಾನಂತೆ........ಗಳಿಸ್ತಾನೆ. ಏನೋ ಅದು ಗಳಿಸೋದು. ನೋಡು, ನಾನೊಂದು ಉಪಾಯ ಹೇಳಿಕೊಡ್ತೇನೆ........ಹಾಗೆ ಮಾ

ದೇಯೋ? ನಿನ್ನ ಪುಸ್ತಕಗಳೆಲ್ಲಾ ಹೋಟಲಿನಲ್ಲಿ ಮಸಾಲೆದೋಸೆ ಖರ್ಚಾದ ಹಾಗೆ ಆಗುತ್ತೆ.''

''ಅದೇನು ಹೇಳು ನೋಡುವ!''

''ನೀನು ಕೀರ್ತಿಪಡೆಯಬೇಕೆಂದರೆ ಒಂದು ಚಮತ್ಕಾರ ಮಾಡ ಬೇಕು. ಏನೆಂಬೆಯೋ........ನಾಲ್ಕಾರು ಜನರನ್ನು ಜೊತೆ ಕೂಡಿಸಿಕೊಳ್ಳ ಬೇಕು........ನೀನು ಕೂತರೆ – ನಿಂತರೆ, ನೀನು ಎದ್ದರೆ – ಬಿದ್ದರೆ, ನೀನು ನಕ್ಕರೆ – ಅತ್ತರೆ, ಏನೋ ಸ್ವಾರಸ್ಯವಿದೆ, ಏನೋ ಚಮತ್ಕಾರವಿದೆ ಅಂತ ಅವರು ಜನರ ಮುಂದೆ ಪತ್ರಿಕೆಗಳಲ್ಲಿ ವರ್ಣಿಸಬೇಕು. ಅದು ಕಿವಿಯಿಂದ ಕಿವಿಗೆ ಹೋಗಿ ನಿನ್ನ ಹಿರಿಮೆಯನ್ನು ಹಾಡುವುದು. ನೀನು ಹೇಳಿದ್ದು, ನೀನು ಬರೆದಿದ್ದು ಕಳಪೆಯೋ ಕೀಳೋ ಉತ್ತಮ ದರ್ಜೆಯ ಸಾಹಿತ್ಯಾಂತ ಜನ ಮುದ್ರೆ ಒತ್ತಿಬಿಡ್ತಾರೆ........''

''ಛೆ! ಛೆ! ನನಗದೆಲ್ಲಾ ಹಿಡಿಸದು. ನನಗೆ ಈ ರೀತಿ ಪ್ರಚಾರ ಗಳೂ, ಒಣ ಪ್ರಶಂಸೆಗಳೂ ಬೇಕಿಲ್ಲ. ನನ್ನ 'ಸೋಲ್' ಒಪ್ಪುವುದಿಲ್ಲ. ನಾನು ಹಾಗೆ ಮಾಡಲಾರೆ. ಮುಖನೋಡಿ ಮಣೆಹಾಕುವವರ ಸಹವಾಸ, ಬಯಲಾಡಂಬರ, ದೊಡ್ಡಸ್ಥಿಕೆಗಳನ್ನು ಕಂಡರೆ ನನಗೆ ವಾಕರಿಕೆ........''

''ಏನು? ಏನಂದೆ? 'ಸೋಲ್.' ಅಹ್ಹಹ್ಹಾ........ಲೋ, ಈ 'ಸೋಲ್'ನ್ನ ನಿನ್ನ 'ಷೂ' ಕೆಳಗಿನ 'ಸೋಲ್'ನಂತೆ ಕಾಣಬೇಕೋ, ಈ ಪ್ರಪಂಚದಲ್ಲಿ ಬದುಕಬೇಕೆಂದರೆ, ತಲೆ ಎತ್ತಿಕೊಂಡು ತಿರುಗಬೇಕೆಂದರೆ. ನಿನ್ನ 'ಪ್ರಿನ್ಸಿಪಲ್ಸ್', ನಿನ್ನ 'ಐಡಿಯಲ್ಸ್', ನಿನ್ನ 'ಸಿನ್ಸಿರಿಟಿ' ಎಲ್ಲಾ ಮೂಲೆಗೆ ತಳ್ಳಬೇಕು. ಥಳಕುಥಳಕಾಗಿ ನಡೆಯಬೇಕು. ದೊಡ್ಡದೊಡ್ಡವ ರನ್ನು ಮೇಲೆಮೇಲೆ ಬಿದ್ದು ಮಾತನಾಡಿಸಬೇಕು. ಕುವಿನಯವೆಂಬ ಅಸ್ತ್ರ ವನ್ನು ಪಯೋಗಿಸಬೇಕು ಕೆಲವು ಸಲ........ಅದು ಬಿಟ್ಟು 'ಸೋಲ್', 'ಆತ್ಮ' ಅಂತ ಕೂತುಕೊಂಡೆಯೋ, ಹಾಗೇ ಕೂತಿರ್ತಿ ನೊಣ ಬಡೀತಾ........ನೋ ಪ್ರೋಗ್ರೆಸ್........''

"ದಮ್ಮಯ್ಯಾ, ನಿನಗೊಂದು ನಮಸ್ಕಾರ. ನಾನೀಗ ನಿನ್ನ ಬುದ್ಧಿವಾದ ವನ್ನು ಕೇಳುವ ಪರಿಸ್ಥಿತಿಯಲ್ಲಿಲ್ಲ. ಮಾಫ್‌ಮಾಡಿ ಬಿಡು."

"ನೋಡು, ಇನ್ನೊಂದು ಸುಲಭವಾದ ಕಾರ್ಯ. ನೀನು ಅವಕಾಶ ದೊರೆತಾಗಲೆಲ್ಲಾ ಜನರ ಮುಂದೆ ನಮ್ರತೆಯನ್ನು ನಟಿಸುತ್ತಾ, ನಿಜ ಸ್ವಪ್ರತಿಷ್ಠೆಯನ್ನು ಕೊಚ್ಚಿಕೊಳ್ಳುವ ವಿದ್ಯೆಯನ್ನಾದರೂ ಕಲಿ. ಆಗ........"

"ಷಟ್ ಅಪ್."

"ಸರಿ, ಬಿಡು ನನಗೇನಂತೆ. ಆ ಪುಸ್ತಕವಾದ್ರೂ ಯಾವುದು? ಅದರ ಗ್ರಂಥಕರ್ತ ಯಾರು? ಅದಷ್ಟಾದರೂ ಹೇಳು."

"ಅಗತ್ಯವಾಗಿ ಹೇಳ್ತೀನೆ ದೊರೆ. ಈ ಪುಸ್ತಕದ ಮೂಲ ತೆಲುಗಿನಲ್ಲಿದೆ. ಗ್ರಂಥಕರ್ತರು ಶ್ರೀ ಎಂ. ಎ. ಮೂರ್ತಿಯವರು. ಪಾಪ, ಕೆಲವು ದಿನಗಳ ಹಿಂದೆ ಅವರು ಕೈಲಾಸವಾಸಿಗಳಾದರು ಪ್ರಕಾಶಕರು ಮದರಾಸಿನ ಯುವ ಬುಕ್ ಡಿಪೋ ಅವರು. ಕೇಳಿದಕೂಡಲೇ ಅನುವಾದಮಾಡಲು ಅನುಮತಿಯಿತ್ತ ಇವರಿಗೆ ನಾನು ವಂದನೆಗಳನ್ನು ಅರ್ಪಿಸಬೇಕು........"

"ಸರಿ, ಏನಯ್ಯಾ ಇದೆ ಪುಸ್ತಕದಲ್ಲಿ."

"ಲಘುಹಾಸ್ಯ ಕತೆಗಳು ೧೯ ಇವೆ ಇದರಲ್ಲಿ....ಆಗತಾನೇ ಸಿಂಹಾಸನವೇರಿದ ಎಳೇ ವಯಸ್ಸಿನ ರಾಜ. ಬಾಲಭಾವನೆಯುಳ್ಳಾತನು. ಆತನನ್ನು ಚಿಕ್ಕಂದಿನಿಂದ ಎತ್ತಿ, ಆಡಿಸಿ, ಮುದ್ದಿಟ್ಟ ಮಂತ್ರಿ. ಅವರಿಬ್ಬರಿಗೂ ಅನೇಕ ಸಂದರ್ಭಗಳಲ್ಲಿ ನಡೆದ ಸಂಭಾಷಣೆಗಳು. ರಾಜನದು ಬಿಸಿರಕ್ತ. ಆತ ಇನ್ನೂ ಚಿಕ್ಕವ, ಅನುಭವಶಾಲಿಯಲ್ಲ. ನೆರೆಹೊರೆಯ ಅರಸರು ಪ್ರಗತಿಪರವಾದ ಕಾರ್ಯಗಳಲ್ಲಿ ಕೈಹಾಕಿರುವರೆಂದಕೂಡಲೇ ತಾನೂ ಅವರೊಂದಿಗೆ ಸರಿಸಮಾನವಾಗಿ ನಡೆಯಬೇಕೆಂಬ ಹಂಬಲ........ಆದರೆ ಆತನ ನಡೆ–ನುಡಿ ಮಾತ್ರ ಸ್ವಲ್ಪ ವಕ್ರ. ಎಲ್ಲಾ ಯದ್ವಾತದ್ವಾ, ಅಯಿಲು ಪಯಿಲು........ಪಾಪ, ಮುದಿಮಂತ್ರಿ ಈ ಹುಡುಗನ ಕೈಗೆ ಸಿಕ್ಕಿ ಹಣ್ಣಾಗುತ್ತಾನೆ. ಆತನಿಗೆ ನಗಬೇಕೋ, ಅಳಬೇಕೋ ತಿಳಿಯದು........ಇವರಿಬ್ಬರ ಸಂಭಾಷಣೆ ಬಹಳ ಚತುರತೆಯಿಂದ ನೇಯ್ದಿದ್ದಾರೆ ಲೇಖಕರು........"

"ಎಲ್ಲಿ ಎಷ್ಟರವರೆಗೆ ಅಚ್ಚಾಗಿದೆಯೋ ನೋಡೋಣ. ಎಲ್ಲಾ ಆಗೋಯ್ತೋ....ಲೇ....ಈ ಕತೆ ಎಲ್ಲೋ ಓದಿದಹಾಗೆ ಜ್ಞಾಪಕ ಕಣೋ...."

"ಹೌದು. 'ಕಾವ್ಯಕನ್ಯೆ' ಎಂಬುದು ನನ್ನ ಗೆಳೆಯ ಶ್ರೀ ಎಸ್. ನಂಜಪ್ಪನವರ 'ಉಷಾ' ಮಾಸಪತ್ರಿಕೆಯಲ್ಲಿ ಪ್ರಕಟವಾಗಿದೆ. ಹಾಗೇ

ನನ್ನ ಪರಮಮಿತ್ರರಾದ ಶ್ರೀ ಎಸ್. ಎಂ. ಮುನಿವೆಂಕಟಪ್ಪ, ಎಂ.ಎ., ಎಂ.ಆರ್.ಎ., ಅವರು ನನಗೆ ಅನೇಕ ವಿಧಗಳಲ್ಲಿ ಸಹಾಯ ಮಾಡಿರುವರು. ಅವರಿಬ್ಬರಿಗೂ ನನ್ನ ಪ್ರೀತಿಪೂರ್ವಕ ವಂದನೆಗಳು. 'ಸಂಪು' ಎಂಬ ಮತ್ತೊಂದು ಕತೆ 'ಕತೆಗಾರ' ವಿಶೇಷಾಂಕವೊಂದರಲ್ಲಿ ಪ್ರಕಟಿಸಿರುವ ಸಂಪಾದಕರಿಗೂ ನನ್ನ ವಂದನೆಗಳು. ಪ್ರಕಾಶಕರಾದ ಎಚ್. ಎನ್. ರಾವ್ ಬ್ರದರ್ಸ್, ಬೆಂಗಳೂರು, ಅವರಿಗೆ ನಾನು ಅಭಾರಿಯಿದ್ದೇನೆ.

"ಸರಿ, ಹೋಗೋಣ ನಡಿ, ಹಾಗೇ ಸುತ್ತಾಡಿಕೊಂಡು ಬರೋಣ."

"ಸ್ವಲ್ಪ ಇರು, ಇನ್ನೊಂದಿಷ್ಟು ಕೆಲ್ಸವಿದೆ. ಈ ಪುಸ್ತಕವನ್ನು ನನ್ನ ಆಪ್ತಮಿತ್ರ ಕೆ. ಆರ್. ರಾಮಚಂದ್ರನ್, M.Sc., (Mys.), M Sc., (Wales) ನನ್ನಲ್ಲಿ ತೋರಿಸಿದ ಪ್ರೀತಿ ವಿಶ್ವಾಸಗಳ ಕುರುಹಾಗಿ ಅನನ್ಯ ಒಲವಿನಿಂದ ಅರ್ಪಿಸಲಪೇಕ್ಷಿಸುತ್ತೇನೆ."

"ಆಯಿತೇನೋ........ಏಳೋ."

* * *

ಯಾರೋ ನನ್ನ ಮೈಹಿಡಿದು ಅಲುಗಾಡಿಸಿದರು. ಎಚ್ಚರವಾಯಿತು. ಕಣ್ಣು ತೆರೆದೆ. ಆಗಲೇ ಬೆಳ್ಳಂಬೆಳಗಾಗಿತ್ತು. ನನ್ನ ಎದುರು ಉಷಾ ಪ್ರೆಸ್ಸಿನ ಹುಡುಗ! ಕಣ್ಣು ಮತ್ತೊಮ್ಮೆ ಉಜ್ಜಿಕೊಂಡೆ....ಹೌದು ಅವನೇ!

"ಸಾರ್....ಅರಿಕೆ ಬರೆದುಕೊಡ್ತೀನಿ ಅಂತ ಹೇಳಿದ್ದರಂತಲ್ಲಾ ?"

"ಹೌದು ನೆನ್ನೆ ಹೇಳಿದ್ದೆ. ಹುಂ! ಒಂದು ಯೋಚನೆ ಹೊಳೆಯಿತು. ನನ್ನ ಕನಸನ್ನೇ ಬರೆದು ಕಳುಹಿಸುತ್ತೇನೆ."

**ವಿ. ಬಿ. ಈ.**



# ಕಾವ್ಯ ಕನ್ಯೆ

"ಶೇಷಯ್ಯಾ!"

"ಬುದ್ಧೀ, ಇಲ್ಲೇ ಇದ್ದೇನೆ........"

"ಇದೇನು ಈ ಕವಿ ಕಳುಹಿಸಿರುವ ಅಹವಾಲು?"

"ಚಿತ್ತ! ಆತನು ನಿಮ್ಮ ಚಿಕ್ಕಪ್ಪಂದಿರ ಕಾಲದಿಂದ ನಮ್ಮ ಆಸ್ಥಾನದ ಆಶ್ರಯದಲ್ಲಿ ಜೀವಿಸುತ್ತಿರುವನು........"

"ಆದರೆ ಏನಂತೆ? ಸಂಬಳ ಹೆಚ್ಚಿಸಬೇಕೆಂತೇನು? ವಾರ್ ಅಲೋಯನ್ಸ್ ಕೇಳಿದ್ದಾನೆಯೆ?"

"ಇಲ್ಲ, ಇಲ್ಲಾ. ಮಹಾಪ್ರಭೂ! ಅಷ್ಟು ಮಾತಾಡಬಲ್ಲನೆ........?"

"ಮತ್ತೇನಿದು? ಇಷ್ಟು ದೊಡ್ಡ ಗ್ರಂಥ ಬರೆದುಕೊಂಡು ಬಂದಿದಾನೆ?"

"ಪ್ರಭೂ! ಆತನು ಈಗ ತಾನೇ ಸೃಷ್ಟಿಸಿದ ಕಾವ್ಯಕನ್ಯೆಯನ್ನು........"

"ಯಾವ ಕನ್ಯೆ?"

"ಕಾವ್ಯ ಕನ್ಯೆ, ಪ್ರಭೂ! ತಮಗೆ ಕೃತಿ ಸಮರ್ಪಣೆ ಮಾಡೋಣವೆಂಬ ಅಭಿಲಾಷೆಯಿಂದ........"

"ನನಗೆ? ನನಗೇ??"

"ಹೌದು ಮಹಾಪ್ರಭೂ, ತಮ್ಮ ಜನ್ಮದಿನೋತ್ಸವ ಸಂದರ್ಭದಲ್ಲಿ, ತುಂಬಿರುವ ಸಭೆಯಲ್ಲಿ, ತಾವು ಪೂರ್ಣಚಂದ್ರನಂತೆ ಪ್ರಕಾಶಿಸುತ್ತಿರುವಾಗ........"

"ಊಂ?"

"ವಂದಿಮಾಗಧಿರು ತಮ್ಮ ಕೀರ್ತಿಯನ್ನು ಸ್ತುತಿಸುತ್ತಿರುವಾಗ, ಸುರಪುಂಗವರು ವೇದೋಕ್ತಿ ಮಂತ್ರಾಕ್ಷತೆಗಳಿಂದ ತಮ್ಮ ಮುಕುಟದ ಮೇಲೆ ಆಶೀರ್ವಚನಗಳನ್ನು ಸುರಿಸುತ್ತಿರುವಾಗ........"

"ಊಂ........ಚೆನ್ನಾಗಿದೆ........"

"ನೃತ್ಯಗಾನಾದಿಗಳಿಂದ, ಮೇಳತಾಳಗಳಿಂದ ದೇವದಾಸಿಯರು ತಮ್ಮ ಸಭೆಯನ್ನು ಇಂದ್ರಸಭೆಯಂತೆ ಬದಲಾಯಿಸುತ್ತಿರುವಾಗ........"

"ಭೇಷ್, ಮಂತ್ರೀ!"

"ಅಂತಹ ಮಹತ್ತರ ಸಮಯದಲ್ಲಿ, ಈ ಪಂಡಿತ ಮಹಾಶಯನು ತನ್ನ ಕಾವ್ಯಕನ್ಯೆಯನ್ನು ತಂದು ಪ್ರಭುಗಳ ಕೈವಶಮಾಡಿ, ತಮ್ಮ ಕೃಪಾಕಟಾಕ್ಷ ವನ್ನು ಹೊಂದಲು ಸಂಕಲ್ಪಿಸಿಕೊಂಡಿರುವನು........"

"ಬಹಳ ಸಾಚಾಮನುಷ್ಯನಂತೆ ಕಾಣುತ್ತಾನೆ. ನಮ್ಮ ಮೇಲೆಷ್ಟು ಅಭಿಮಾನ! ........ಶೇಷಯ್ಯಾ, ಒಂದು ಮಾತು........ನಮ್ಮಿಬ್ಬರಲ್ಲೇ ಇರಲಿ........ಅದನ್ನು ಸ್ವೀಕರಿಸೋಣವೇನು?"

"ಯಾರನ್ನು ಪ್ರಭೂ?"

"ಅದೇ........ಆ ಕನ್ಯೆಯನ್ನು?"

"ಸೊಗಸಾಗಿ ಸ್ವೀಕರಿಸಬಹುದು. ಅದರಲ್ಲೇನಿದೆ ತಪ್ಪು....ನೀವು ಮಹಾರಾಜರು, ಆತನು ಮಹಾಪಂಡಿತ, ಅದು ಮಕರಂದವನ್ನು ಹೋಲುವ ಕಾವ್ಯಸುಂದರಿ........"

"ನೆರೆದ ಸಭೆಯಲ್ಲಿ ತಂದುಕೊಡುವನೆ........?"

"ಹೌದು ಸ್ವಾಮಿ. ಅದರಲ್ಲೇನು ದೋಷ? ತುಂಬಿದ ಸಭೆಯಲ್ಲಿ ಸಮರ್ಪಿಸಿದಾಗಲೇ ತಮ್ಮ ಘನತೆ, ಅದರ ಘನತೆ, ಆ ಪಂಡಿತನ ಘನತೆ........"

"ಶೇಷಯ್ಯಾ........"

"ಏನು ಮಹಾಸ್ವಾಮಿ, ಏಕೆ ಅಷ್ಟು ವಿಚಾರದಲ್ಲಿ ಮುಳುಗಿರುವಿರಿ?"

"ಈ ಕಾವ್ಯಕನ್ಯೆಯನ್ನು........ಆ ಪಂಡಿತನು ನಮಗೆ ಒಪ್ಪಿಸುವ ವಿಷಯ........"

"ಹೂಂ. ಏನದರ ವಿಷಯ?"

"ನಮ್ಮ ಮಾತೃಶ್ರೀಯವರೊಂದಿಗೆ ಹೇಳಬೇಡವೆ........?"

"ಅದಕ್ಕೇನು........ಹೇಳೋಣವಾಗಲಿ........"

"ಅವರು ಕೇಳಿ ಏನಾದರೂ ಹೇಳಬಹುದು........"

"ಮಾತೃಶ್ರೀಯವರೆ? ನಿಮ್ಮನ್ನು? ಏನಾದರೂ ಹೇಳುವರೇ? ನೀವೇನಂತಹ ಪಾಪಕಾರ್ಯವನ್ನೆಸಗುತ್ತಿರುವಿರಿ? ಮತ್ತೆ ಹೇಳಬೇಕೆಂದರೆ, ಈ ವಿಷಯವನ್ನರಿತು ಆಕೆ ಬಹಳ ಸಂತೋಷಪಡುವರು........"

"ನನಗೇನೋ ಹೆದರಿಕೆಯಾಗಿದೆಯಪ್ಪಾ........"

"ಹೆದರಬೇಡಿ ಮಹಾಪ್ರಭೂ! ಹೆದರಬೇಕಾದ ವಿಷಯವೇನಿಲ್ಲ, ಇದರಲ್ಲಿ!"

"ಶೇಷಯ್ಯಾ........!"

"ಪ್ರಭೂ........"

"ಈ ಪಂಡಿತನು ತನ್ನ ಕಾವ್ಯಕನ್ಯೆಯನ್ನು ನಮಗೆ ತಂದುಕೊಡುವುದರ ಉದ್ದೇಶವಾದರೂ ಏನಿರಬಹುದು........?"

"ಮಹಾಸ್ವಾಮಿ! ತಮಗಲ್ಲದೆ ಮತ್ಯಾರಿಗೆ ಕೊಡುತ್ತಾನೆ....ತಾವೇ ಸರ್ವವಿಧಗಳಲ್ಲೂ ಅದನ್ನು ಸ್ವೀಕರಿಸಲು ಅರ್ಹರು!"

"ನಮ್ಮ ಚಿಕ್ಕಪ್ಪಂದಿರು ಜೀವಿಸಿದ್ದಾಗ್ಯೆ ಅವರೂ ಹೀಗೆ ಏನಾದರೂ ಸ್ವೀಕರಿಸುತ್ತಿದ್ದರೋ?"

"ಲಕ್ಷಗಟ್ಟಲೆ........ಇದರಲ್ಲಿ ತಪ್ಪೇನಿದೆ?"

"ಸರಿ........ಹಾಗಾದರೆ ಅದರ ಹೆಸರೇನು?"

"ಯಾವುದರ ಹೆಸರು, ಮಹಾಸ್ವಾಮಿ?"

"ಅದೇನಪ್ಪಾ... ಈ ಪಂಡಿತನು ನಮಗೆ ಸಮರ್ಪಿಸುತ್ತಾನಲ್ಲಾ...."

"ಅದೇ?........ಚಂದ್ರಕಳಾ........"

"ಹೆಸರು ಬಹಳ ಸೊಗಸಾಗಿದೆ."

"ಹೆಸರಿಗೆ ತಕ್ಕಂತೆ ಆಕರ್ಷಣೀಯತೆಯೂ ಇದೆ ಸ್ವಾಮಿ ಅದರಲ್ಲಿ."

"ಹಾಗಾದರೆ........ಶೇಷಯ್ಯಾ."

"ಅಪ್ಪಣೆ........ಪ್ರಭೂ."

"........ನೋಡು........ಆಕೆಯ ವಯಸ್ಸೆಷ್ಟು?"

"................"

---

# ಮೇಧಾವಿ

"ಶೇಷಯ್ಯಾ"

"ಪ್ರಭೂ, ಇಲ್ಲೇ ಇರುವೆನು........"

"ನಿನ್ನೆ ನಮ್ಮ ಪಟ್ಟಾಭಿಷೇಕ ಸಮಯದಲ್ಲಿ ನನ್ನನ್ನು ಪ್ರಜೆಗಳಿಗೆ ಪರಿಚಯಮಾಡಿಕೊಡುತ್ತಾ ಏನೋ ಹೇಳಿದೆ ನೀನು........"

"ಏನು ಹೇಳಿದೆ ಪ್ರಭೂ!"

"ಜ್ಞಾಪಕವಿಲ್ಲ ......."

"ಯಾವ ಸಂದರ್ಭದಲ್ಲೋ ತಾವು ಸ್ವಲ್ಪ ತಿಳಿಸಿದರೆ........"

"ನನ್ನ ಸುಗುಣಗಳನ್ನು ವರ್ಣಿಸುತ್ತಾ ನಾನೇನೋ ಮಹಾ........ ಎಂದೆಯಲ್ಲಾ!"

"ಓಹೋಹೋ, ಅದೇ? ತಾವು ಮಹಾಮೇಧಾವಿಗಳೆಂದೆ."

"ಮೇಧಾವಿಯೇ? ಅಂದರೆ?"

"ಹೆಚ್ಚು ಮೆದುಳು ಇರುವರೆಂದು."

"ಮೆದುಳು ಅಂದರೆ?"

"ಮೆದುಳು ಸ್ವಾಮಿ, ಜ್ಞಾನೇಂದ್ರಿಯ........"

"ಎಲ್ಲಿರುವುದಾ ಪದಾರ್ಥ........?"

"ತಮ್ಮ ತಲೆಯಲ್ಲಿ ಮಹಾಸ್ವಾಮಿ. ಮೂಸಂಬಿಯಷ್ಟು ದೊಡ್ಡದಾಗಿರುತ್ತದೆ."

"ಅದು ನನಗೊಬ್ಬನಿಗೇ ಇರುವುದೇ?"

"ಇಲ್ಲ ಬುದ್ಧೀ, ಎಲ್ಲರಿಗೂ ಇರುವುದು."

"ಹಾಗಾದರೆ ನನ್ನದೇನು ದೊಡ್ಡಸ್ಥಿಕೆ."

"ನಿಮ್ಮ ಘನತೆ ನಿಮ್ಮ ಮೆದುಳೇ? ಎಲ್ಲರದೂ ನೆಲ್ಲಿಕಾಯಿಯಷ್ಟು ಇದ್ದರೆ ನಿಮ್ಮದು ಮೂಸಂಬಿಯಷ್ಟು."

"ಸೈಜು ದೊಡ್ಡದೆನ್ನುವೆಯಾ ನನ್ನದು........"

"ಸೈಜು ಮಾತ್ರವಲ್ಲ, ಅಂತಸ್ತೂ ಸಹ........"

"ಅಂದರೆ........?"

"ತಮ್ಮ ತಲೆಯಲ್ಲಿರುವ ಈ ಮೆದುಳು ಯಂತ್ರವು ಸಾಮಾನ್ಯರಿಗೆ ಇರುವಂತಹದಲ್ಲ. ಪ್ರಭುಗಳಿಗೆ ಮಾತ್ರವೇ ಅಂತಾದ್ದು, ಅಷ್ಟು ದೊಡ್ಡದಾಗಿರುವುದು.

"ವಿಶದೀಕರಿಸಿ ಹೇಳುವೆಯಾ?"

"ಚಿತ್ತ. ತಮ್ಮ ರಾಜ್ಯದಲ್ಲಿ ಯಾರಿಗೂ ತಮಗಿರುವಷ್ಟು ದೊಡ್ಡ ಮೆದುಳು ಇಲ್ಲ."

"ಹಾಗೋ! ಆದರೆ ಇದು ಯಾವ ಕೆಲಸಕ್ಕೆ ಬರುತ್ತದೆ?"

"ಬುದ್ಧಿವಿಕಾಸವನ್ನು ಕೊಡುವುದು ಇದೇ ಮಹಾಸ್ವಾಮಿ! ನಿಮ್ಮ ಕೈಗಳು ಖಡ್ಗವನ್ನು ಹಿಡಿದುಕೊಂಡು ಯುದ್ಧಮಾಡುವವು, ಕಾಲುಗಳು ನಡೆಯುವವು, ಕಣ್ಣುಗಳು ನೋಡುವವು. ಹೀಗೆ ಆಯಾ ಅವಯವಗಳು ಆಯಾ ಕೆಲಸಗಳನ್ನು ಮಾಡುವವು – ಇವುಗಳೆಲ್ಲದರ ಕೈಯಲ್ಲಿ ಆ ಕೆಲಸಗಳನ್ನು ಮಾಡಿಸುವುದು ಮೆದುಳು. ಇದು ಚಿಕ್ಕದಾದರೆ, ಸಣ್ಣಪುಟ್ಟ ಕೆಲಸಗಳನ್ನು ಮಾಡಿಸುತ್ತದೆ. ದೊಡ್ಡದಾದರೆ – ತಮಗಿರುವಂತಹುದಾದರೆ – ಬ್ರಹ್ಮಾಂಡವಾದ ಕೆಲಸವನ್ನು ಮಾಡಿಸುತ್ತದೆ."

"ಹಾಗೋ, ಸ್ವಲ್ಪ ಬಿಡಿಸಿ ಹೇಳು."

"ನನ್ನ ಮೆದುಳು ಸಣ್ಣದು – ಆದ್ದರಿಂದ ನಾನು ಮಂತ್ರಿಯಾಗಿಯೇ ಇರುವೆನು. ತಮ್ಮದು ದೊಡ್ಡದು, ನೀವು ಪ್ರಭುಗಳಾಗಿ ಪಾಲಿಸುತ್ತಿರುವಿರಿ."

"ಅರ್ಥವಾಯಿತು."

"ಧನ್ಯನಾದೆ."

"ಅಂದರೆ ಇದು ಬಹಳ ಬೆಲೆಯುಳ್ಳದ್ದೆಂದಾಯಿತು."

"ನಿಮ್ಮ ರಾಜ್ಯಭಾರವು ಇದರ ಮೇಲೇ ಆಧಾರವಾಗಿದೆ."

"ಅಂದರೆ, ಅದು ನನಗೂ, ನನ್ನ ರಾಜ್ಯಭಾರಕ್ಕೂ ಬಹಳ ಮುಖ್ಯವಾದದ್ದೆಂದಾಯಿತು."

"ಚಿತ್ತ."

"ನಾನು ಅದನ್ನು ಕುರಿತು ಬಹಳ ಜಾಗ್ರತೆ ತೆಗೆದುಕೊಳ್ಳಬೇಕಲ್ಲವೆ?"

"ಯಾವುದನ್ನು ಕುರಿತು ಮಹಾಪ್ರಭೂ?"

"ಈ ಮೆದುಳನ್ನು ಕುರಿತು."

"ಹೌದು ಮಹಾಸ್ವಾಮಿ. ಅದಕ್ಕೆ ಎಷ್ಟು ಮಾತ್ರವೂ ಬಳಲಿಕೆಯಾಗದಂತೆ, ಜಾಗ್ರತೆಯಾಗಿ ಕಾಪಾಡಿಕೊಳ್ಳಬೇಕು."

"ನಮ್ಮ ಖಜಾನೆಯಲ್ಲಿನ ಹಣಕಾಸಿನ ಹಾಗೆ, ಅಲ್ಲವೆ?"

"ಒಂದು ರೀತಿ ನೋಡಿದರೆ, ಹಾಗೇ ಬುದ್ಧೀ."

"ಹಾಗಾದರೆ ಅದನ್ನು ತೆಗೆದು ಖಜಾನೆಯಲ್ಲಿ ಭದ್ರವಾಗಿಡುವಂತೆ ಹೇಳು."

"..............."



# ಗಮ್ಯ ಸ್ಥಾನ

"ಶೇಷಯ್ಯಾ!"

"ಪ್ರಭೂ."

"ಏನು ಹಾಗೆ ನೋಡುತ್ತಿರುವೆ?"

"ಏನಿಲ್ಲ........ತಮ್ಮ ಧೋರಣೆ ನೋಡಿದರೆ ಮತ್ತೆ ಏನೋ........"

"ಭಯಪಡಬೇಡ, ಶೇಷಯ್ಯಾ........ಕಾಲ ಕಳೆಯಲು ಸುಮ್ಮನೆ ಕರೆದೆ."

"ಧನ್ಯನಾದೆ."

"ಆದರೆ ಶೇಷಯ್ಯಾ........"

"ಪ್ರಭೂ."

"ನೋಡು........"

"ನೋಡುತ್ತಿದ್ದೇನೆ ಮಹಾಸ್ವಾಮಿ........ಸಹಿಸುತ್ತಿದ್ದೇನೆ."

"ನಮ್ಮ ಊರಿಗೆ........"

"ಊಂ."

"ನಮ್ಮ ಊರಿಗೂ ಸಿರಿಪುರಕ್ಕೂ ಎಷ್ಟು ದೂರ?"

"ಇಷ್ಟೇಯೇ?........ನನ್ನನ್ನು ಕೊಂದುಬಿಡುವಿರೆಂದಿದ್ದೆ."

"ಅಷ್ಟೇಪ್ಪಾ."

"ಚಿತ್ತ. ಪ್ರಭುಗಳಿಗೆ ಸಿರಿಪುರದ ಪ್ರಸಕ್ತಿ ಯಾಕೆ ಬಂತು?"

"ಅನವಸರ ಪ್ರಸಂಗ ನಮಗೆ ಬೇಡ, ಶೇಷಯ್ಯಾ! ಹೇಳಿದಕ್ಕೆ ಸಮಾಧಾನ ಕೂಡಲೇ ಬರಬೇಕು. ನಾನು ಕೇಳಿದ್ದು ನಮ್ಮ ಊರಿಗೂ ಸಿರಿಪುರಕ್ಕೂ ಎಷ್ಟು ದೂರಾಂತ? ತಿಳಿದಿದ್ದರೆ ಹೇಳು....ಇಲ್ಲದಿದ್ದರೆ........"

"ಚಿತ್ತ. ಸಿರಿಪುರ ನಮ್ಮೂರಿಂದ ಹದಿನಾರು ಮೈಲಿ ದೂರದಲ್ಲಿದೆ."

"ಇಷ್ಟೇಯೇ ?"

"ಇಷ್ಟೇ, ಮಹಾಸ್ವಾಮಿ. ಹೋಗೋಣವೇ ?"

"ಛೆ....ಯಾಕೆ ಅಲ್ಲಿಗೆ....ಸುಮ್ಮನೆ ಕೇಳಿದೆ."

"ಹಾಗೋ ?"

"ಹಾಗಾದರೆ ನೋಡು ಶೇಷಯ್ಯಾ."

"ಪ್ರಭೂ."

"ಸಿರಿಪುರ ನಮ್ಮೂರಿಗೆ ಹದಿನಾರು ಮೈಲಿ ಅಂತ ಅಲ್ಲವೇ ನೀನು ಹೇಳಿದ್ದು."

"ಹೌದು, ಮಹಾಸ್ವಾಮಿ."

"ರೈಟ್! ಹಾಗಾದರೆ ಸಿರಿಪುರಕ್ಕೆ ನಮ್ಮೂರು ಎಷ್ಟು ದೂರವಿರುವುದೋ ಸ್ವಲ್ಪ ಆಲೋಚನೆಮಾಡಿ ಹೇಳಬಲ್ಲೆಯಾ ?"

"ಪ್ರಭೂ, ನಡೆಯಿರಿ, ಹೋಗೋಣ."

"ಎಲ್ಲಿಗೆ? ಸಿರಿಪುರಕ್ಕೇನು ?"

"ಅಲ್ಲಲ್ಲ! ಪ್ರಮಾದಕರವಾದ ಆಲೋಚನೆಗಳನ್ನು ಮಾಡುವವರನ್ನು ಬಚ್ಚಿಡುವ ಸ್ಥಳಕ್ಕೆ."

"ಶೇಷಯ್ಯಾ! ಇದು ಅಪಹಾಸ್ಯಕ್ಕೆ ಸಮಯವಲ್ಲ. ನಮ್ಮೂರಿಗೆ ಸಿರಿಪುರವು ೧೬ ಮೈಲಿಗಳಾದರೆ, ಸಿರಿಪುರಕ್ಕೆ ನಮ್ಮೂರು ಎಷ್ಟು ದೂರ ಅಂತ ಕೇಳಿದೆ. ಸೂಕ್ತ ಉತ್ತರ ಕೊಡು."

"ಪ್ರಭೂ, ಹೀಗೆ ನನ್ನ ಪ್ರಾಣ ಹಿಂಡುವುದು ಸರಿಯಲ್ಲ. ಈ ಊರಿಗೆ ಆ ಊರು ಎಷ್ಟು ದೂರವಿರುವುದೋ, ಆ ಊರಿಗೂ ಈ ಊರು ಅಷ್ಟೇ ದೂರಾಂತ ನಿಮಗೆ ತಿಳಿಯದ ವಿಷಯವಲ್ಲವೆಂದುಕೊಳ್ಳುತ್ತೇನೆ."

"ಅಂದರೆ ಸಿರಿಪುರಕ್ಕೆ ನಮ್ಮೂರು ಹದಿನಾರು ಮೈಲಿಗಳೆಂತಲೇ ?"

"ನಾನು ಹೇಳುವುದೇನು ಬುದ್ಧಿ !........ಸತ್ಯವಾದ ಮಾತು."

"ಶೇಷಯ್ಯಾ !"

"ಹಾಂ, ಪ್ರಭೂ."

"ಎಷ್ಟು ಅಪಖ್ಯಾತಿ !"

"ಏನು ಮಹಾಸ್ವಾಮಿ ?"

"ಸಿರಿಪುರಕ್ಕೆ ನಮ್ಮೂರು ಹದಿನಾರು ಮೈಲಿ ಮಾತ್ರವೇನೆ?"

"ನಿಜ ಮಹಾಸ್ವಾಮಿ........ನಮ್ಮ ಪ್ರಾರಬ್ಧ........"

"ಶೇಷಯ್ಯಾ, ಅದು ಸಾಧ್ಯವಿಲ್ಲ. ಸಿರಿಪುರ ನಮ್ಮೂರಿಗೆ ಹದಿನಾರು ಮೈಲಿಗಳಿರಬಹುದು. ಸಿರಿಪುರಕ್ಕೆ ಮಾತ್ರ ನಾವು ಹದಿನಾರು ಮೈಲಿಗಳಿಗಿಂತಲೂ ಹೆಚ್ಚು ದೂರದಲ್ಲಿರಲೇಬೇಕು."

"ಅದು ಹೇಗೆ ಸಾಧ್ಯ?"

"ಸಾಧ್ಯವಲ್ಲದಿದ್ದರೆ ಸಾಧ್ಯವಾಗುವಂತೆ ಮಾಡಬೇಕು. ನೀನೇ ಹೇಳಿದ್ದೆಯಲ್ಲಾ, ಅವರ್‍ಯಾರೋ ಪ್ರಯತ್ನಮಾಡಿ ಎವರೆಸ್ಟ್ ಶಿಖರವನ್ನು ಸೇರಿದರೆಂದು."

"ಈಗ ಆ ಹೋಲಿಕೆ ಸರಿಹೋಗುವುದಿಲ್ಲ ಸ್ವಾಮಿ."

"ಶೇಷಯ್ಯಾ, ಅದೆಲ್ಲಾ ನನಗೆ ಬೇಡ. ಇಪ್ಪತ್ನಾಲ್ಕು ಗಂಟೆಗಳಲ್ಲಿ........"

"ಹಾಂ, ಮಹಾಪ್ರಭೂ!"

"ಇದೋ, ತಕ್ಷಣ ಸಿರಿಪುರಕ್ಕೆ ಹೋಗುತ್ತಿದ್ದೇನೆ........ಹದಿನಾರು ಮೈಲಿಗಳೂ ಅಂತ ಅಲ್ಲವೇ ನೀನು ಹೇಳಿದ್ದು........"

"ಹೌದು ಬುದ್ಧೀ"

"ಸರಿ, ತಕ್ಷಣ ಸಿರಿಪುರಕ್ಕೆ ಹೋಗುತ್ತಿದ್ದೇನೆ........ಹದಿನಾರು ಮೈಲಿ ದೂರದಲ್ಲಿರುವ ಸಿರಿಪುರಕ್ಕೆ ಹೋಗುತ್ತಿದ್ದೇನೆ........"

"ಹೋಗಿ........?"

"ಅಲ್ಲಿಗೆ ಹೋಗಿ ನಾನು ಮತ್ತೆ ಇಲ್ಲಿ ಬರುವವೇಳೆಗೆ ಆ ಊರಿನಿಂದ ಈ ಊರಿಗೆ ಹದಿನಾರು ಮೈಲಿ ದೂರವೇ ಇದ್ದಲ್ಲಿ ನಾನು ಸಹಿಸಲಾರೆ........ ಅದಕ್ಕೂ ಹೆಚ್ಚು ದೂರವಿರಬೇಕು."

"ಪ್ರಭೂ, ನಗೆ, ಅಳು ಬರುತ್ತದೆ."

"ಏನಿಲ್ಲ, ಭಯಪಡಬೇಡ........ಮತ್ತೆ ನಾನು ಅಲ್ಲಿಂದ ಇಲ್ಲಿಗೆ ಬರುವ ವೇಳೆಗೆ ನಮ್ಮ ಊರನ್ನು ಸ್ವಲ್ಪ ದೂರ ಹಿಂದಕ್ಕೆ ಸರಿಸಿಬಿಡು."

"ಹಾಂ."

“ಛೆ, ಏನಿದು ಹುಚ್ಚು ಹೆದರಿಕೆ ?”

“ಪ್ರಭೂ, ಮಾತಿಗೆ ಹೇಳ್ತೀನೆ........ನೀವು ಅಲ್ಲಿಂದ ಇಲ್ಲಿಗೆ ಬರುವ ವೇಳೆಗೆ ನಮ್ಮ ಊರು ಇನ್ನೊಂದು ನಾಲ್ಕು ಮೈಲಿ ಹಿಂದಕ್ಕೆ ಹೋಗುವುದೆಂದು ಊಹಿಸೋಣ........”

“ಹೌದು........ಅಷ್ಟೇ........ನಮಗೆ ಬೇಕಾದದ್ದು.”

“ಪ್ರಭೂ ಅಷ್ಟೇ ಆದರೆ, ನಮ್ಮ ಊರಿಗೆ ಸಿರಿಪುರ ಇಪ್ಪತ್ತು ಮೈಲಿ ಅಲ್ಲವೆ ?”

“ಸಾಯಿಸಿದೆ....ಶೇಷಯ್ಯಾ? ನನ್ನ ಆಶೆಗಳೆಲ್ಲವೂ ಕುಸಿದುಬಿದ್ದವು. ನೀನು ಹೇಳುವುದು ನಿಜ....ಹರೇ ರಾಂ.”

“ಪ್ರಭೂ ಧೈರ್ಯ ವಹಿಸಿ.”

“ಇನ್ನೇನು ಧೈರ್ಯ, ಶೇಷಯ್ಯಾ! ಹಾಗಾದರೆ ಯಾವಾಗಲೂ ನಮ್ಮೂರಿಗೆ ಸಿರಿಪುರವು ಎಷ್ಟು ದೂರವೋ, ಸಿರಿಪುರಕ್ಕೆ ನಮ್ಮದೂ ಅಷ್ಟೇ ದೂರವೆಂದು ಹೇಳುವೆಯಲ್ಲವೇ ?”

“ಅದೇ ಸ್ವಾಮಿ ನಾನು ಹೇಳುವುದು.”

“ಛೆ, ಹಾಳು ಪರಿಸ್ಥಿತಿಗಳು........ಹಾಳು ಊರುಗಳು........”

“ಇವು ಸದಾ ಇರುವ ಪರಿಸ್ಥಿತಿಗಳು ಬುದ್ಧೀ.”

“ಆದರೂ ಸಿರಿಪುರಕ್ಕೆ ಸ್ವಲ್ಪವೂ ಮರ್ಯಾದೆ ತಿಳಿಯದು. ನಮ್ಮ ಊರು ಸಿರಿಪುರಕ್ಕೆ ದೂರಹೋಗಿ ಸಾಧಿಸುವ ದೂರವನ್ನು ಮತ್ತೆ ಸಿರಿಪುರವೂ ಸಾಧಿಸುವುದೆನ್ನುವುದು ನನ್ನ ತಲೆಗೆ ಚಿಟ್ಟುಹಿಡಿಸುವ ವಿಷಯ.”

“ಚಿತ್ತ. ಈ ಸ್ಥಿತಿಯಲ್ಲಿ ಅಸಲು ನಮ್ಮ ಊರು ಸಿರಿಪುರಕ್ಕೆ ದೂರವಾಗಿ ಹೋಗುವೆನೆನ್ನುವುದೇ ತಪ್ಪು, ಮಹಾಸ್ವಾಮಿ.”

“ತಪ್ಪೆ ?........ನಮ್ಮದೇ ಆ ತಪ್ಪು ?”

“ಹೌದು.”

“ಹಾಗಾದರೆ ಶೇಷಯ್ಯಾ, ನಮ್ಮ ಊರೂ, ಸಿರಿಪುರ ಎರಡೂ ತಿಳಿಗೇಡಿ ಊರುಗಳು........ನಡೆ........ಮದರಾಸಿಗೆ ಹೋಗಿ ಕೊನ್ನೇಮಿರಾ ಹೋಟಲಿನಲ್ಲಿ ಹಾಯಾಗಿ ಜೀವಿಸೋಣ.”

---

# ವೇಷಧಾರಿಗಳು

"ಶೇಷಯ್ಯಾ!"

"ಪ್ರಭೂ."

"ನಾವು ಈ ಪ್ರಚನ್ನವೇಷದಿಂದ ತಿರುಗಾಡಲು ಮೊದಲುಮಾಡಿ ಒಂದು ವಾರವಾಗಿರಬೇಕಲ್ಲವೆ?"

"ಹೌದು, ಮಹಾಸ್ವಾಮಿ. ಸರಿಯಾಗಿ ಒಂದು ವಾರವಾಯ್ತು."

"ಈ ಒಂದು ವಾರದಲ್ಲಿ ನಾವು ಏನು ಮಾಡಿದೆವು?"

"ಮಹಾಪ್ರಭುಗಳಿಗೆ ತಿಳಿಯದ ವಿಷಯವಾದರೂ ಏನಿದೆ?"

"ಎಲ್ಲೂ, ಯಾರೂ, ನಮ್ಮನ್ನು ಗುರ್ತಿಸಲಿಲ್ಲ."

"ಇಲ್ಲ. ಮಹಾಪ್ರಭೂ........ನಮ್ಮ ವೇಷಗಳು ಬಹಳ ಸೊಗಸಾಗಿ ಹೊಂದಿಕೊಂಡಿವೆ."

"ನಾನು ಕುರಿ ಕಾಯುವವನ ಹಾಗೆ ಕಾಣಿಸುತ್ತಿರುವೆನಲ್ಲವೇ?"

"ವೇಷದಲ್ಲಿ ಮಾತ್ರವೇ ಸ್ವಾಮಿ."

"ವೇಷದಲ್ಲಿ! ಇಲ್ಲ, ನಿಜವಾಗಿಯೂ ಅಂತ ತಿಳಿದುಕೊಂಡೆಯಾ?"

"ನಿಜವೆಂದು ತಿಳಿದುಕೊಳ್ಳುವುದಾದರೂ ಹೇಗೆ ಮಹಾಪ್ರಭೂ........ ಚರ್ಮ ಸುಲಿದುಬಿಡೋಲ್ಲವೆ?"

"ಶೇಷಯ್ಯಾ!"

"ದೇವಾ."

"ನಿನ್ನ ವೇಷವೂ ಬಹಳ ಸೊಗಸಾಗಿದೆ. ನೀನೂ ಥೇಟ್ ವ್ಯಾಪಾರಿಯ ಹಾಗೆ ಕಾಣುವೆ."

"ಬುದ್ಧಿಯವರ ಅಪ್ಪಣೆ."

"ನಾವಿಬ್ಬರೂ ರಾಜ–ಮಂತ್ರಿ ಎಂದು ಪ್ರಜೆಗಳು ಊಹಿಸಿಕೊಳ್ಳಲು ಅವಕಾಶವೇ ಇಲ್ಲ; ಅಲ್ಲವೇ ?"

"ಹೌದು ಮಹಾಸ್ವಾಮಿ."

"ಹಾಗಾದರೆ ಶೇಷಯ್ಯಾ........"

"ಬುದ್ಧೀ."

"ನಾವು ನಮ್ಮ ಸಂಸ್ಥಾನದಲ್ಲೆಲ್ಲಾ ಸಂಚರಿಸಿದೆವೆಂದಾಯಿತು, ಅಲ್ಲವೆ ?"

"ಸುಮಾರು ಅಷ್ಟೇ."

"ನಮಗೆ ನಮ್ಮ ಪ್ರಜೆಗಳ ಕಷ್ಟಸುಖಗಳು ತಿಳಿದಂತಾಯಿತು, ಹೌದೋ ?"

"ಅದರಲ್ಲಿ ಸಂದೇಹವೇನು, ಒಡೆಯಾ ?"

"ಹಾಗಾದರೆ ನೋಡು ಶೇಷಯ್ಯಾ."

"ನೋಡುತ್ತಿದ್ದೇನೆ ಪ್ರಭೂ."

"ನಮ್ಮ ತಂದೆಯವರೂ ಸಹ ತಮ್ಮ ಆಳ್ವಿಕೆಯಲ್ಲಿ, ಹೀಗೇ ಅನೇಕ ಸಾರಿ ವೇಷ ಧರಿಸಿ ರಾಜ್ಯದಲ್ಲೆಲ್ಲಾ ಸಂಚರಿಸುತ್ತಿದ್ದರಲ್ಲವೆ ?"

"ಹೌದು ದೊರೆ."

"ಹೀಗೆ ಸಂಚಾರಮಾಡಿ ಕೆಲವು ದಿನಗಳಾದ ಮೇಲೆ ಮನೆಗೆ ಹಿಂದಿರುಗುತ್ತಿದ್ದರು, ಹೌದೋ ?"

"ಹೌದು........ಮನೆಗಲ್ಲದೆ ಮತ್ತೆಲ್ಲಿಗೆ ಹೋಗುವರು ?"

"ಆಗ ಎಲ್ಲರೂ ಅವರನ್ನು ನೋಡಿ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಿದ್ದರು."

"ಬಹಳ ಮೆಚ್ಚಿಕೊಳ್ಳುತ್ತಿದ್ದರು."

"ಹಾಗಾದರೆ ನಾನು ಅರಮನೆಗೆ ಹಿಂದಿರುಗಿದ ಕೂಡಲೇ ಜನ ನನ್ನನ್ನು ಕೊಂಡಾಡುವರಲ್ಲವೆ ?"

"ನಿಸ್ಸಂದೇಹವಾಗಿ........ಆದರೆ........"

"ಏಕೆ ? ಏನು ಗೊಣಗಾಡುತ್ತಿರುವೆ, ಶೇಷಯ್ಯಾ ?"

"ಏನಿಲ್ಲ....ನಾವು ಪ್ರಚನ್ನವೇಷದಲ್ಲಿ ತಿರುಗಾಡುತ್ತಿರುವ ಸಂದರ್ಭ ದಲ್ಲಿ, ನಾವು ಒಂದು ಘನಕಾರ್ಯ ಮಾಡುತ್ತಿರುವ ಸಮಯದಲ್ಲಿ, ಯಾರಿಂದ ಲಾದರೂ ಕಂಡುಹಿಡಿಯಲ್ಪಡಬೇಕು........"

"ಅಂದರೆ?"

"ಈ ವೇಷದಲ್ಲಿ ತಾವು ಯಾವುದೋ ಒಂದು ಸ್ತುತ್ಯ ಕಾರ್ಯವನ್ನು ಮಾಡುತ್ತಿರುವಾಗ ನಮಗೆ ಪರಿಚಿತರು ಯಾರಾದರೊಬ್ಬರು ನೋಡಬೇಕು. ನೋಡಿ ಅವರು ಇತರರಿಗೆ ಹೇಳಿದರೆ, ಆ ಬಾಯಿಂದ ಈ ಬಾಯಿಗೆ ಹರಡಿ, ಅದು ಪ್ರಖ್ಯಾತಿಯಾಗಿ ಬದಲಾಯಿಸಿ, ತಮ್ಮ ಕೀರ್ತಿಯನ್ನು ಶಿಖರಕ್ಕೇರಿಸು ವುದು........"

"ಸ್ವಲ್ಪ ಅರ್ಥವಾಗುತ್ತಿದೆ........ಆದರೆ ಈ ವಿಷಯದಲ್ಲಿ ನಮ್ಮ ತಂದೆ ಯವರ ಅನುಭವಗಳನ್ನು ಹೇಳಬಲ್ಲೆಯಾ?"

"ಮಹಾ ಪ್ರಸಾದ....ದಯವಿಟ್ಟು ಲಾಲಿಸಿ, ನನ್ನೊಡೆಯಾ!"

"ಕೇಳುತ್ತಿರುವೆನು."

"ಒಂದು ಸಾರಿ ತಮ್ಮ ತಂದೆಯವರು ಹೀಗೇ ವೇಷ ಬದಲಾಯಿಸಿ ಕೊಂಡು ತಿರುಗಾಡುತ್ತಿರುವ ಸಮಯದಲ್ಲಿ ಒಬ್ಬ ಗೋವಳಿಗನಿಗೆ ಒಂದು ಸವರ್ಣ ಕೊಟ್ಟರು."

"ಊಂ........ಆಗ........?"

"ಆತನು ಆ ನಾಣ್ಯವನ್ನು ತೆಗೆದುಕೊಂಡು ಊರಿನೊಳಗೆ ಕಾಲಿಟ್ಟ ಕೂಡಲೇ ರಾಜಭಟರು ಆತನನ್ನು ಕಳ್ಳನೆಂದು ಭಾವಿಸಿ ಶಿಕ್ಷೆಗೊಳ ಪಡಿಸಿದರು........"

"ಅಯ್ಯೋ, ಪಾಪ........ಎಂಥಹ ಪ್ರಮಾದ ಸಂಭವಿಸಿತು."

"ಈ ಸಮಾಚಾರವು ನಿಮ್ಮ ತಂದೆಯವರ ಕಿವಿಗೆ ಬಿದ್ದಕೂಡಲೇ ಆ ಗೋವಳಿಗನ ಶಿಕ್ಷೆಯನ್ನು ರದ್ದುಮಾಡಿ, ಆತನಿಗೆ ಮತ್ತೆ ಕೆಲವು ಚಿನ್ನದ ನಾಣ್ಯಗಳನ್ನಿತ್ತು ಕಳುಹಿಸಿದರು."

"ಎಷ್ಟು ಒಳ್ಳೆಯ ಕೆಲಸ ಮಾಡಿದರು!"

"ಆಗ ಪ್ರಜೆಗಳೆಲ್ಲರೂ ಅದರಲ್ಲಿನ ಗೂಢಾರ್ಥವನ್ನು ಗ್ರಹಿಸಿ, ಮೊಟ್ಟ ಮೊದಲು ಆತನಿಗೆ ಚಿನ್ನದ ನಾಣ್ಯವನ್ನು ಕೊಟ್ಟದ್ದೂ ಸಹ ತಮ್ಮ ತಂದೆ

ಯವರೆಂದು ತಿಳಿದುಕೊಂದು, ಅವರನ್ನೂ, ಅವರ ಕಾರ್ಯವನ್ನೂ ಪ್ರಶಂಸಿಸಿದರು, ಶ್ಲಾಘಿಸಿದರು. ನಿಮ್ಮ ಪೂಜ್ಯಪಿತರು ಇಂತಹ ಕಾರ್ಯಗಳನ್ನೆಷ್ಟೋ ಮಾಡಿ, ಹೆಸರುವಾಸಿ ಹೊಂದಿದರು."

"ಹಾಗಾದರೆ ಶೇಷಯ್ಯಾ........ನಾವೂ ಕೆಲವು ನಾಣ್ಯಗಳನ್ನು ಯಾರಿಗಾದರೂ ಕೊಡೋಣವೇನು?"

"ಹಣವೆಂದರೆ ಹಣವೇ ಅಂತಲ್ಲ ಮಹಾಸ್ವಾಮಿ, ಮಾತಿಗೆ ಹೇಳಿದೆ. ನಾವು ಇನ್ನೂ ಮಹತ್‌ಕಾರ್ಯಗಳನ್ನು ಮಾಡಬಹುದು."

"ಎಂಥಹ ಕಾರ್ಯಗಳು ಅವು?"

"ನಾನಾಗಲೇ ಸಿದ್ಧಪಡಿಸಿದ್ದೇನೆ ಮಹಾಸ್ವಾಮಿ, ಒಬ್ಬ ಬ್ರಾಹ್ಮಣನನ್ನು."

"ಬ್ರಾಹ್ಮಣನೇ?........ಏಕೆ?"

"ಅಪ್ಪಣೆ........ಅದರಲ್ಲಿದೆ ಸ್ವಾಮಿ ಸ್ವಾರಸ್ಯ."

"ಏನದು? ಏನಿದೆ ಶೇಷಯ್ಯಾ........ಶೀಘ್ರವಾಗಿ ಹೇಳು ......"

"ಆ ಬ್ರಾಹ್ಮಣನನ್ನು ಒಂದು ಹುಲಿ ಅಟ್ಟಿಸಿಕೊಂಡು ಬರುವ ಸಮಯದಲ್ಲಿ........"

"ಎಂದು?........ಎಲ್ಲಿ??"

"ಕೇಳಿ........ತೊಂದರೆಪಡಬೇಡಿ. ಆ ಬ್ರಾಹ್ಮಣನನ್ನು ಹುಲಿ ಅಟ್ಟಿಸಿಕೊಂಡು ಬರುವ ಸಮಯದಲ್ಲಿ ತಾವು ಆ ಹುಲಿಯನ್ನು ಕೊಂದುಹಾಕಿದಿರಿ."

"ನಾನೇ? ಶೇಷಯ್ಯಾ? ನಾನು ಹುಲಿಯನ್ನು ಸಾಯಿಸುವುದೇ?"

"ಸಾಯಿಸಿದಿರಿ ಮಹಾಸ್ವಾಮಿ, ಸಾಯಿಸಿದಿರಿ. ಈ ವೇಳೆಗಾಗಲೇ ಆ ಬ್ರಾಹ್ಮಣನು ಊರೆಲ್ಲಾ ಹರಡಿಬಿಟ್ಟಿರಬಹುದು."

"ಶೇಷಯ್ಯಾ... ಇದು ಸುಳ್ಳು ಅಲ್ಲವೇ?"

"ಪ್ರಭುಗಳು ಈ ರೀತಿ ಭಯಪಡಕೂಡದು. ಊರನ್ನು ಸಮೀಪಿಸುತ್ತಿದ್ದೇವೆ ......."

"ಶೇಷಯ್ಯಾ."

"ಪ್ರಭೂ, ನಿಶ್ಚಿಂತೆಯಾಗಿರಿ. ಈ ರಕ್ತ ಸವರಿಸಿರುವ ಖಡ್ಗವನ್ನು ಧೈರ್ಯವಾಗಿ ಹಿಡಿದುಕೊಂಡು ಊರಿನೊಳಗೆ ಕಾಲಿಡಿ........"

"ನಾನೇ ಹುಲಿಯನ್ನು ಸಾಯಿಸಿದೆನೆಂದು ಹೇಳಬೇಕೇ?"

"ನೀವೇನೂ ಹೇಳಬೇಡಿ. ಎಲ್ಲಾ ಆ ಬ್ರಾಹ್ಮಣನೇ ಹೇಳಿರುತ್ತಾನೆ. ಪ್ರಜೆಗಳು ನಿಮ್ಮನ್ನು ಕೊಂಡಾಡುತ್ತಿದ್ದರೆ, ಪ್ರಶಂಸಿಸುತ್ತಿದ್ದರೆ, ನೀವು ಮಾಡಬೇಕಾದ ಕಾರ್ಯವೇನೆಂದರೆ ಸುಮ್ಮನೆ ಗಂಭೀರವಾಗಿರಬೇಕು........ ಊರೊಳಗೆ ಬಂದೆವು. ಧೈರ್ಯ ವಹಿಸಿ........ಹುಲಿಯನ್ನು ಕೊಂದಂತೆ ನಟಿಸಿ."

"ಪ್ರಯತ್ನಿಸುತ್ತೇನೆ........ಆದರೆ ಶೇಷಯ್ಯಾ, ಹುಲಿ ಎಷ್ಟು ಅಡಿ ಉದ್ದವಿತ್ತೆಂದು ಯಾರಾದರೂ ಕೇಳಿದರೆ ಏನು ಹೇಳಲಿ?"

"ಯಾರೂ ಕೇಳಲಾರರು........ಯಾರಾದರೂ ಹಾಗೆ ಕೇಳಿದರೆ ಅವರಿಗೆ ಶಿಕ್ಷೆ ವಿಧಿಸೋಣ."

"ಶೇಷಯ್ಯಾ, ಏನದು ಜನರ ಗುಂಪು?"

"ಅಪ್ಪಣೆ........ಅವರೆಲ್ಲಾ ನಮ್ಮ ಪ್ರಜೆಗಳು ಮಹಾಸ್ವಾಮಿ........ ತಮ್ಮನ್ನು ಗೌರವಾದರಗಳಿಂದ ಸನ್ಮಾನಿಸಲು ಬರುತ್ತಿರುವರು........ಠೀವಿಯಿರಲಿ ನಿಮ್ಮ ನಡೆಯಲ್ಲಿ........"

"ಅವರೆಲ್ಲರಿಗೂ ಮುಂದೆ ಬರುವ ಬ್ರಾಹ್ಮಣನೇ ನೀನು ಹೇಳಿದ್ದು?"

"ಅಪ್ಪಣೆ........ಅಪ್ಪಣೆ........ಆತನೇ ಮಹಾಸ್ವಾಮಿ."

"ಆತನಿಗೆ ನನ್ನ ವಿಷಯ ಚೆನ್ನಾಗಿ ಗೊತ್ತು........ನಾಯಿಯನ್ನು ಕಂಡರೂ ಬೆದರುವೆನೆಂಬ ವಿಷಯ ಆತನಿಗೆ ತಿಳಿಸಿದೆ........ಓ........"

"ಆದರೇನಂತೆ ಮಹಾಸ್ವಾಮಿ........ಗೊತ್ತುಮಾಡಿದಷ್ಟು ಹಣ ಆತನ ಕೈಯಲ್ಲಿಟ್ಟುಬಿಟ್ಟರೆ, ಬಾಯಿ ಬಿಡೋಲ್ಲ........"

"ಎಷ್ಟಕ್ಕೆ ಕ್ರಯಮಾಡಿದೆ ಈ ಕೀರ್ತಿಯನ್ನು?"

"ಆ ವಿವರಗಳನ್ನೆಲ್ಲಾ ನಾನು ನೋಡಿಕೊಳ್ಳುತ್ತೇನೆ ಬಿಡಿ........ಎಲ್ಲಿ ನಿಮ್ಮ ನಡೆಯಲ್ಲಿ ಮತ್ತಷ್ಟು ಗಾಂಭೀರ್ಯವಿರಬೇಕು, ಹುಲಿಯನ್ನು ಕೊಂದ ಸಾಹಸಿಯಂತೆ........ಅವರೆಲ್ಲರೂ ಹತ್ತಿರಕ್ಕೆ ಬರುತ್ತಿದ್ದಾರೆ........"



# ತಿರುವು ಮುರುವು

"ಶೇಷಯ್ಯಾ!"

"ಪ್ರಭೂ."

"ನೋಡಿದೆಯಾ........?"

"ಏನು ಮಹಾಸ್ವಾಮಿ."

"ಸಂಸ್ಥಾನಾಧೀಶರೆಲ್ಲಾ ಎಷ್ಟು ಉದಾರಬುದ್ಧಿಯಿಂದ ನಡೆಯುತ್ತಿರುವರೋ........?"

"ಇಲ್ಲದಿದ್ದಲ್ಲಿ ಅಸಲಿಗೇ ಮೋಸವಾಗುವ ಪರಿಸ್ಥಿತಿ ಬರುತ್ತಿದೆ........ ತಾವು ಹೇಳಿದ ಉದಾರಬುದ್ಧಿ ಯಾವ ವಿಷಯದಲ್ಲಿ?"

"ಹುಚ್ಚ! ನೋಡು ತಿರುವಾಂಕೂರು, ಕೊಚ್ಚಿನ್ ಸಂಸ್ಥಾನಗಳನ್ನು........!"

"................"

"ಇನ್ನೂ ಹೊಳೆಯಲಿಲ್ಲವೆ? ಸೂರ್ಯನು ಅಸ್ತಮಿಸದ ಮಹಾಸಾಮ್ರಾಜ್ಯವೂ ತೆಗೆದುಹಾಕಲಾರದ ಪಾಶೀ ಶಿಕ್ಷೆಯನ್ನು ಈ ಸಂಸ್ಥಾನಗಳು ತೆಗೆದುಹಾಕಿವೆ."

"ಮೆಚ್ಚಬೇಕಾದ ವಿಷಯ."

"ಆದರೆ ನಾವು ಮಾತ್ರ ಇನ್ನೂ ಹಿಂದೆ ಬಿದ್ದಿದೇವೆ."

"................"

"ಸರಿ ಸಂಸ್ಥಾನಗಳೆಲ್ಲಾ ಅನೇಕ ಸುಧಾರಣೆಗಳನ್ನು ಜಾರಿಗೆ ತರುತ್ತಿದ್ದರೆ........"

"ತಾವು ಹೇಳುತ್ತಿರುವುದು ನನಗರ್ಥವಾಗುತ್ತಿಲ್ಲ."

"ಪಾಶೀ ಶಿಕ್ಷೆ....ಪಾಶೀ ಶಿಕ್ಷೆ, ತಿಳಿಯಿತೇ ಶೇಷಯ್ಯಾ? ನಾವೂ ಸಹ ಈ ಶಿಕ್ಷೆಯನ್ನು ತೆಗೆದುಹಾಕಬೇಕು."

"ಪ್ರಭೂ, ಅದು ಅಸಾಧ್ಯ."

"ಶೇಷಯ್ಯಾ........ಏನೂ ಅಸಾಧ್ಯವಿಲ್ಲ."

"ಪ್ರಭೂ, ನಿಮಗೆ ತಿಳಿಯದೇ?"

"ಸುಮ್ಮನಿರು. ಅದೆಲ್ಲಾ ಕೆಲಸಕ್ಕೆ ಬಾರದು. ನಮ್ಮ ಸಂಸ್ಥಾನದಲ್ಲಿ ಇನ್ನು ಮುಂದೆ ಪಾಶೀ ಶಿಕ್ಷೆಯಿಲ್ಲ."

"ಪ್ರಭೂ."

"ಮುಚ್ಚು ಬಾಯಿ. ಇಪ್ಪತ್ನಾಲ್ಕು ಗಂಟೆಗಳಲ್ಲಿ ಪಾಶೀ ಶಿಕ್ಷೆಯನ್ನು ರದ್ದುಮಾಡುತ್ತಿದ್ದೇವೆ ನಾವು."

"ಈ ಕೆಲಸ ನಾವು ಮಾಡಲಾರೆವು......."

"ಶೇಷಯ್ಯಾ! ನನ್ನ ಸಂಸ್ಥಾನ, ನನ್ನ ಇಷ್ಟ. ನನ್ನ ಪ್ರಜೆಗಳಲ್ಲಿ ಯಾರಾದರೂ ಅಕಸ್ಮಾತ್ ಖೂನಿ ಮಾಡಿದರೆ ನಾನು ಮತ್ತೆ ಅವರ ಪ್ರಾಣವನ್ನು ತೆಗೆದು ಪಾಪವನ್ನು ಮೂಟೆ ಕಟ್ಟಿಕೊಳ್ಳಲಾರೆ."

"ಪ್ರಭೂ, ತಮ್ಮ ಭೂತದಯೆ ಮೆಚ್ಚಿಕೊಳ್ಳಬೇಕಾದದ್ದೇ........ ಆದರೆ?"

"ಆದರೆ ಏನು?........ಹಾಗೇಕೆ ನೋಡುತ್ತಿದ್ದೀಯಾ ಬೆಪ್ಪನ ಹಾಗೆ."

"ಪ್ರಭೂ, ನಮಗೆ ಈ ಶಿಕ್ಷೆ ವಿಧಿಸುವ ಹಕ್ಕೇ ಇಲ್ಲದಿರುವಾಗ........"

"ಏನು ಹೇಳುತ್ತಿರುವೆ........ಶೇಷಯ್ಯಾ, ಏನು ಹೇಳಿದೆ?"

"ನಮಗೆ ಪಾಶೀ ಶಿಕ್ಷೆ ವಿಧಿಸುವ ಹಕ್ಕೇ ಇಲ್ಲವೆಂದೆ........ಆ ಹಕ್ಕು ಇರುವಷ್ಟು ದೊಡ್ಡ ಸಂಸ್ಥಾನವಲ್ಲ ನಮ್ಮದು."

"ಹಾಗಾದರೆ ನಮ್ಮ ಸಂಸ್ಥಾನದಲ್ಲಿ ಪಾಶೀ ಶಿಕ್ಷೆ ಯಾರ ಅಪ್ಪಣೆ ಮೇರೆ ನಡೆಯುತ್ತಿದೆ?"

"ಪ್ರಭುತ್ವದ ನ್ಯಾಯಾಧೀಶರ ಆಜ್ಞೆ ಪ್ರಕಾರ."

"ಯಾವ ಪ್ರಭುತ್ವ."

"ನಮ್ಮ ಮೇಲಿರುವ ಪ್ರಭುತ್ವ."

"ಗೌರ್ನರೂ, ವೈಸ್ರಾಯರು ಅವರೇ?"

"ಹೌದು ಪ್ರಭೂ."

"ಹಾಗಿದ್ದಲ್ಲಿ ನಾವು ನೆನೆಸಿಕೊಂಡಾಗ ಈ ಶಿಕ್ಷೆಯನ್ನು ರದ್ದುಮಾಡಿಸಲಾರವೆಂದಾಯಿತು."

"ಶಿಕ್ಷೆ ವಿಧಿಸುವ ಹಕ್ಕೇ ಇಲ್ಲದಿರುವಾಗ, ಅದನ್ನು ರದ್ದುಮಾಡುವ ಹಕ್ಕು ನಮಗೆಲ್ಲಿ?"

"ಶೇಷಯ್ಯಾ, ನೀನು ಕೂಡಲೇ ಒಂದು ಅರ್ಜಿ ಬರೆಯಿಸಿ ಹಾಕು ವೈಸ್ರಾಯರಿಗೆ."

"ಏನೆಂದು ಮಹಾಸ್ವಾಮಿ?"

"ನಮಗೆ ಪಾಶೀ ಶಿಕ್ಷೆ ವಿಧಿಸುವ ಹಕ್ಕು ಬೇಕೆಂದು!"



# ಎ. ಆರ್. ಪಿ.

"ಶೇಷಯ್ಯಾ"

"ಪ್ರಭೂ."

"ನೀನು ತಿಮ್ಮರಸನಂತಹ ಮನುಷ್ಯ ಕಾಣಯ್ಯಾ."

"ಏನೋ ಪ್ರಭುಗಳು ಅಭಿಮಾನದಿಂದ ಹಾಗೇ ಹೇಳುತ್ತಿರುವಿರೇ ಹೊರತು........"

"ಶೇಷಯ್ಯಾ."

"ಚಿತ್ತ........ದೇವರೇ."

"ನಿನ್ನ ವಿನಯವನ್ನು ಮೆಚ್ಚಿದೆ........ನಿನ್ನ ತಲೆ ತಿಮ್ಮರಸನ ತಲೆಯನ್ನು ಮೀರಿಸಿದ ತಲೆ........"

"ಚಿತ್ತ....ಪ್ರಭುಗಳ ಕೃಪೆ....ಇವೆಲ್ಲವೂ ಏಕೋ ಅಪ್ಪಣೆ ಕೊಡಲಿಲ್ಲ."

"ಬಿರ್ತಿದ್ದೇವೆ ಆ ವಿಷಯಕ್ಕೇನೆ....ಹಾಗಾದರೆ ನೋಡು ಶೇಷಯ್ಯಾ."

"ನೋಡುತ್ತಿದ್ದೇನೆ ಮಹಾಪ್ರಭೂ."

"ನಮ್ಮ ಸಂಸ್ಥಾನದಲ್ಲಿ ಎ. ಆರ್. ಪಿ. ಇಲ್ಲದಿರುವುದು ನಮ್ಮ ರಾಜನೀತಿಗೆ ಲೋಪವಲ್ಲವೆ?"

"ಚಿತ್ತ........ಅಲ್ಲವೆಂದು ಯಾರು ಹೇಳಬಲ್ಲರು? ಆದರೆ, ನಮ್ಮ ಸಂಸ್ಥಾನದಲ್ಲೆಲ್ಲಾ ಹಳ್ಳಿಗಳೇ ಅಲ್ಲವೇ?........ಇಲ್ಲಿ ಎ. ಆರ್. ಪಿ. ಅವಶ್ಯಕತೆ ಅಷ್ಟೇನಿರುತ್ತದೆ........?"

"ಶೇಷಯ್ಯಾ!"

"ಹಾಂ! ಪ್ರಭೂ."

"ಈ ಮಧ್ಯೆ ಇಂತಹ ತಿಳಿಗೇಡಿ ಮಾತುಗಳು ನಿನ್ನ ಬಾಯಿಂದ ಬಂದಿರಲಿಲ್ಲ."

"ತಪ್ಪಾಯಿತು........ಕಪಾಳಕ್ಕೆ ಹಾಕಿಕೊಳ್ಳುತ್ತೇನೆ."

"ಈಗಲಾದರೂ ಗ್ರಹಿಸಿದೆಯೋ ನಮ್ಮ ಸಂಸ್ಥಾನದಲ್ಲಿ ಎ. ಆರ್. ಪಿ. ಇರಬೇಕೆಂದು ?"

"ಚಿತ್ತ. ಪ್ರಭುಗಳು ನೆನೆಸಿದರೆ........"

"ಈ ತಕ್ಷಣವೇ ಏರ್ಪಾಟು ಮಾಡಬೇಕು, ನಮ್ಮ ಸಂಸ್ಥಾನಾದ್ಯಂತವೂ."

"ಎ. ಆರ್. ಪಿ. ಯೇ, ಮಹಾಸ್ವಾಮಿ."

"ಹೂಂ. ಹೌದು........ಅದಕ್ಕೆ ಪ್ರಧಾನೋದ್ಯೋಗಿ ಯಾರೆಂದು ಕೊಂಡಿರುವೆ ?"

"ಚಿತ್ತ........ಯಾರೆಂದುಕೊಳ್ಳಲಿ, ಮಹಾಸ್ವಾಮಿ."

"ನಮ್ಮ ಹಿರಿಯ ಕುಮಾರ....ಕೊಟ್ಟಿವು ಆತನಿಗೆ ಆ ಪದವಿ........"

"ಧನ್ಯೋಸ್ಮಿ!"

"ಈ ಒಂದೇಟನಿಂದ ನಾವೂ ನಾಗರೀಕರೆಂದೂ, ನಮ್ಮ ಸಂಸ್ಥಾನವು ಇತರ ಸಂಸ್ಥಾನ, ಪ್ರಾಂತ್ಯಗಳಿಗೆ ಯಾವ ವಿಧದಲ್ಲೂ ಕಡಿಮೆಯಿಲ್ಲವೆಂದೂ ಇಡೀ ಜಗತ್ತಿಗೆ ತಿಳಿಯುತ್ತದೆ........"

"ಹೌದು ಮಹಾಸ್ವಾಮಿ, ಹೌದು."

"ಎಷ್ಟು ದಿನದಿಂದ ಎ. ಆರ್. ಪಿ. ಇಲ್ಲದೆ ಹಿಂದೆ ಬಿದ್ದಿದ್ದೇವೆ? ಶೇಷಯ್ಯಾ, ಎಷ್ಟು ಅಪಕೀರ್ತಿ ನಮಗೆ........"

"ನಿಜ ಮಹಾಸ್ವಾಮಿ........ಈಗಲಾದರೂ ನೀವು ನಿಶ್ಚಯಿಸಿರುವುದನ್ನು ನೋಡಿದರೆ........"

"ಶೇಷಯ್ಯಾ, ನಾವು ಏರ್ಪಾಟು ಮಾಡುವ ಎ.ಆರ್.ಪಿ.ಗೆ ಒಂದು ಪ್ರತ್ಯೇಕತೆಯಿರಬೇಕು, ಎಲ್ಲ ಎ.ಆರ್.ಪಿ.ಗಳ ಹಾಗಲ್ಲದೆ........"

"ಹೌದು ರಾಯರೇ........ಇರಬೇಕು!"

"ಯುದ್ಧವು ಮುಗಿದ ತರುವಾಯಲೂ ಸಹ ನಮ್ಮ ಎ.ಆರ್.ಪಿ. ಕೆಲಸ ಮಾಡುತ್ತಿರುತ್ತದೆ, ಇತರ ಶಾಖೆಗಳಂತೆ, ಅಲ್ಲವೇ?"

"ಹೌದು ಮಹಾಸ್ವಾಮಿ! ಆಗಲೇ ನಮ್ಮ ಕೀರ್ತಿ ಪ್ರಪಂಚಕ್ಕೆ ತಿಳಿಯಬೇಕಾದರೆ........"

"ಆದರೆ ನೋಡು ಶೇಷಯ್ಯಾ....ಈ ಜಪಾನರು ಮುಠ್ಠಾಳರು........ ಅವರಿಗೆ ಮಾನ ಮರ್ಯಾದೆಗಳು ತಿಳಿಯವು."

"ಹೌದು ಬುದ್ಧೀ."

"ನಮ್ಮ ಸಂಸ್ಥಾನದ ಮೇಲೆ ಒಂದು ವಿಮಾನವನ್ನಾದರೂ ಕಳುಹಿಸಿದರೇ ಎಂದಾದರೂ."

"ತಿಳಿಗೇಡಿಗಳು........ಇಂಥಹ ಪ್ರಚಂಡ ಪ್ರಭುಗಳು ಇರುವರೆಂದು ಅವರು ಗ್ರಹಿಸಿದರಲ್ಲವೇ? ಆದರೂ ನಮ್ಮವೆಲ್ಲವೂ ಹಳ್ಳಿಗಾಡುಗಳು........"

"ಕನಿಷ್ಟ ನಮ್ಮ ಊರಿನ ಮೇಲಾದರೂ ಒಂದೇ ಒಂದು ವಿಮಾನ ಹಾರಾಡಕೂಡದೇ? ನಾವು ಇಷ್ಟು ಹಾತೊರೆಯುತ್ತಿರುವಾಗ........"

"ನಾವು ಎ. ಆರ್. ಪಿ. ಏರ್ಪಾಟುಗಳನ್ನು ಮೊದಲು ಮಾಡೋಣ. ಅದನ್ನು ನೋಡಿಯಾದರೂ ಒಂದೆರಡು ವಿಮಾನಗಳು ನಮ್ಮ ಊರಿನ ಮೇಲೆ ಹಾರಾಡದೆ ಇರಲಾರವು........"

"ಒಂದು ವಿಮಾನ ಬಂದರೂ ಸಾಕು........ನಮ್ಮ ಊರಿನಲ್ಲಿ ಸೈರೆನ್ ಕೂಗುವುದನ್ನು ಕೇಳಬೇಕೆಂದು ತಹತಹಪಡುತ್ತಿರುವೆನು........"

"..............."

# ರೀಷನಿಂಗ್

"ಶೇಷಯ್ಯಾ, ಹೇಳಲೇ ಇಲ್ಲವಲ್ಲಾ ನೀನು?"

"ಏನು ಸ್ವಾಮಿ?"

"ಇನ್ನೂ ಏನೂ ಅಂತ ಮೆಲ್ಲಗೆ ಕೇಳ್ತೀಯಲ್ಲಾ........ಪಾಪ, ಮೊಲೆ ಗೂಸು."

"ಚಿತ್ತ. ನನ್ನಿಂದಲೇನಾದರೂ ಅಪರಾಧ ನಡೆದಿದ್ದರೆ........"

"ಎಷ್ಟು ಸಾರೀ ಅಂತ ಕ್ಷಮಿಸಲಿ?"

"ಚಿತ್ತ....ಮತ್ತೆ ಯಾವ ತಿಳಿಗೇಡಿತನ ಮಾಡಿದೆ ಮಹಾಪ್ರಭೂ...."

"ಮಂತ್ರಿ! ಶೇಷಯ್ಯಾ....ನಿನ್ನ ಮೂಲಕ ನನ್ನ ಪ್ರಾಣಕ್ಕೆ ಬೇಸರವಾಗಿ ಬಿಟ್ಟಿದೆ."

"ಅಯ್ಯಯ್ಯೋ....ಭಯಪಡಿಸಿ ಸಾಯಿಸುತ್ತಿರುವಿರಿ ನನ್ನನ್ನು........ ಇದು ತಮಗೆ ಧರ್ಮವಲ್ಲ."

"ಶೇಷಯ್ಯಾಧಮಾ! ಕಟ್ಟಿಡು ನಿನ್ನ ಈ ವೇಷಗಳನ್ನು....ನೋಡುತ್ತಲೇ ಇದ್ದೇನೆ ನಿನ್ನ ಪಂಚಮಾಂಗ ದಳದ ಕಾರ್ಯಗಳನ್ನು........"

"ಪ್ರಭುಗಳು ನನ್ನ ಪಾಲಿಗೆ ಅತ್ತೆಯಂತಿರುವಿರಿ....ಈ ರೀತಿ ಸೊಸೆಯತನ ಸಹಿಸಲಾರೆ. ಇದಕ್ಕಿಂತಲೂ ತಮ್ಮ ಕೈಯಿಂದಲೇ ನನ್ನೀ ಪ್ರಾಣವನ್ನು ತೆಗೆದುಬಿಟ್ಟರೆ ಉಪಕಾರವಾಗುವುದು. ದೇವಾ, ಹಿಸುಕಿ, ಹಿಸುಕಿ ಸಾಯಿಸದೆ ನನ್ನ ತಪ್ಪನ್ನು ತಿಳಿಸಿ."

"ನಿನ್ನ ತಿಳುವಳಿಕೆ ಹಾಳಾಯಿತು! ನಮ್ಮ ಸಂಸ್ಥಾನಕ್ಕೆ ಅಪ್ರತಿಷ್ಠೆ ತರುತ್ತಿರುವೆ. ನೆರೆಹೊರೆಯ ಸಂಸ್ಥಾನಾಧೀಶರ ಮುಂದೆ ನಾನು ತಲೆ ತಗ್ಗಿಸಬೇಕಾದ ಪರಿಸ್ಥಿತಿಗೆ ನನ್ನನ್ನು ನೂಕುತ್ತಿರುವೆ."

"ಪೀಠಿಕೆಗಳು ಬೇಡ ಮಹಾಸ್ವಾಮಿ........ನನ್ನ ತಪ್ಪನ್ನು ನನಗೆ ತಿಳಿಸಿ, ಬೇಕಿದ್ದಲ್ಲಿ ನನಗೆ ಪಾಶೀ ಶಿಕ್ಷೆ ವಿಧಿಸಿ."

"ವಿಧಿಸುತ್ತೇನೆ........ಅವಸರ ಪಡಬೇಡ. ಈಗ ನಮ್ಮ ದೇಶದಾದ್ಯಂತ್ಯವೂ, ಎಲ್ಲ ರಾಷ್ಟ್ರಗಳಲ್ಲೂ, ಸಂಸ್ಥಾನಗಳಲ್ಲೂ ಏನು ನಡೆಯುತ್ತಿರುವುದೋ ನಿನಗೆ ಗೊತ್ತೇ?"

"ಚಿತ್ತ........ಕಾಂಗ್ರೆಸ್ಸು ಮುಂದಾಳುಗಳು ಜೈಲುಗಳಲ್ಲಿ ಕೊಳೆಯುತ್ತಿದ್ದಾರೆ........ತಿಳಿಗೇಡಿಗಳು ರಾಜ್ಯಭಾರ ಮಾಡುತ್ತಿದ್ದಾರೆ........ಜಪಾನೀಯರು ಮಣಿಪುರವನ್ನು ಸಮೀಪಿಸುತ್ತಿರುವರು."

"ಛೆ, ಛೆ, ಈ ಕಂತೆಯಲ್ಲ ನಾನು ಕೇಳಿದ್ದು."

"ಹಾಗಾದರೆ........ರೈಲು ದರಗಳನ್ನು ಹೆಚ್ಚಿಸಲು ಸರ್ಕಾರಕ್ಕೆ ಧೈರ್ಯವಿಲ್ಲದಾಯಿತು. ಸೌತ್ ಈಸ್ಟರ್ನ್ ಏಷ್ಯಾ ಕಮೇಂಡ್ ಡೆಲ್ಲಿಯಿಂದ ಸಿಂಹಳ ದ್ವೀಪಕ್ಕೆ ಬದಲಾಯಿಸಿದ್ದಾರೆ........ಬೊಂಬಾಯಿ ಬಂದರಿನಲ್ಲಿ ಒಂದು ಹಡಗು ಭಾರೀ ಬೆಂಕಿಗೆ ಗುರಿಯಾಗಿ ಅಗಾಧ ಅನಾಹುತ ಸಂಭವಿಸಿತು........"

"ಓ, ನಿಲ್ಲಿಸು, ನಿಲ್ಲಿಸು ಶೇಷಯ್ಯಾ! ಅಮೃತಾಂಜನದ ದರ ವಿಪರೀತವಾಗಿದೆ........ಇದಕ್ಕಿಂತಲೂ ನಮ್ಮ ದೇಶದಲ್ಲಿ ನಡೆಯುತ್ತಿರುವ ಮುಖ್ಯ ವಿಷಯಗಳು ನಿನಗೆ ತಿಳಿಯದೇ........"

"ಅನೇಕವು ತಿಳಿದಿವೆ ಮಹಾಸ್ವಾಮಿ........ಆದರೆ ಅದರಲ್ಲಿ ಒಂದಾದರೂ ನಿಮಗೆ, ನಿಮ್ಮ ಮನಸ್ಸಿಗೆ ಹಿಡಿಯದು....... ಹೀಗೆ ಅನ್ಯಾಯವಾಗಿ ನನ್ನನ್ನು ಹಿಸುಕಿ ಸಾಯಿಸುವ ಬದಲು, ವಿಷಯವೇನೋ ತಾವೇ ತಿಳಿಸಿಬಿಟ್ಟರೆ........"

"ನೋಡು, ನಮ್ಮ ದೇಶದಾದ್ಯಂತ್ಯವೂ ನಡೆಯುತ್ತಿರುವ ವಿಷಯಗಳಲ್ಲಿ ರೇಷನಿಂಗ್ ಒಂದಲ್ಲವೇ?"

"ಅಲ್ಲವೆಂದು ಯಾರು ಹೇಳಿದರು?"

"ಹಾಗಾದರೆ ಮಂಕೇ, ನಮ್ಮ ಸಂಸ್ಥಾನದಲ್ಲೂ ರೇಷನಿಂಗ್ ಜಾರಿಗೆ ತರಬೇಕೆಂಬ ವಿಷಯ........ಅಷ್ಟು ಮಾತ್ರ ತಿಳುವಳಿಕೆ ನಿನಗಿರಬೇಡವೇ? ........ಸರಿಸಮಾನರಾದವರೆದುರು ನಮಗೆಷ್ಟು ಕೇವಲವೋ ನೋಡು........"

"ನಿಮಗೆ ಮತಿಹೋಗಿದೆ ಸ್ವಾಮಿ........ನಮ್ಮ ಸಂಸ್ಥಾನದಲ್ಲಿ ರೇಷ ನಿಂಗ್ ಅವಶ್ಯಕತೆಯೇ ಇಲ್ಲ."

"ಛೆ, ಛೆ, ನಿನ್ನ ಬುದ್ಧಿ ಮುಂಡಮೋಚಿತು....ನೆರೆಹೊರೆಯ ಸಂಸ್ಥಾನ ಗಳೂ, ಪ್ರಾಂತಗಳೂ ಅಷ್ಟೂ ಪ್ರಗತಿಪರವಾದ ಕಾರ್ಯಗಳನ್ನು ಅವಲಂಬಿ ಸುತ್ತಿದ್ದರೆ........"

"ನಮಗೆ ಅಕ್ಕಿಯ ಕೊರತೆಯಿಲ್ಲ ಮಹಾಸ್ವಾಮಿ. ನಮ್ಮ ಸಂಸ್ಥಾನ ದಲ್ಲಿ ಬೆಳೆದ ಬೆಳೆ ನಮಗೆ ಹತ್ತು ವರ್ಷಗಳಿಗೆ ಸಾಕಾಗುತ್ತದೆ."

"ಶೇಷಯ್ಯಾ, ಈ ನಾಟಕಗಳೆಲ್ಲಾ ಸಾಕು. ಇನ್ನೊಂದು ಇಪ್ಪತ್ನಾಲ್ಕು ಗಂಟೆಗಳಲ್ಲಿ ನಮ್ಮ ಸಂಸ್ಥಾನದಲ್ಲಿ ರೇಷನಿಂಗ್ ಜಾರಿಗೆ ತರ ಬೇಕು."

"ಸ್ವಾಮಿ, ನನ್ನ ಮಾತನ್ನು ಸ್ವಲ್ಪ ಲಾಲಿಸಿ........ಈ ವಿಧವಾಗಿ ಬರುವ ಅಪ್ರತಿಷ್ಠೆ........"

"ಇಲ್ಲ, ಶೇಷಯ್ಯಾ........ನಿನ್ನ ಈ ಹಾಳುಪುರಾಣ ಸ್ವಲ್ಪಹೊತ್ತು ನಿಲ್ಲಿಸು.... .. ನಾಳೆ ಈ ವೇಳೆಗೆ ನಮ್ಮ ಸಂಸ್ಥಾನದಲ್ಲಿ ರೇಷ಼ ಡಿಪೋಗಳನ್ನು ತೆಗೆಯಬೇಕು........"

"ಅಯ್ಯೋ ದೇವರೇ........ಇದೆಲ್ಲಿಯ........"

"ಶೇಷಯ್ಯಾ, ಕೇಳು ನನ್ನ ಮಾತು. ಯಾವ ವಿಷಯದಲ್ಲೂ ನಾವು ಹಿಂದೆ ಬಿದ್ದಿರಕೂಡದೆಂದು ನಿನಗೆ ಲಕ್ಷ ಸಾರಿ ಹೇಳಿದ್ದೇನೆ."

"ನನ್ನ ಮಾತು ಸ್ವಲ್ಪ ಕಿವಿಗೆ ಹಾಕಿಕೊಳ್ಳಿ ನನ್ನ ದೊರೆ. ನಮ್ಮ ರಾಜ್ಯದಲ್ಲಿ ಯಾರಿಗೂ ಅಕ್ಕಿಯ ಕೊರತೆಯಿಲ್ಲ ... ಬೇಕಾದಷ್ಟು ಬೆಳೆ........ ಎಲ್ಲರಿಗೂ ತಿನ್ನಲು ಬೇಕಾದಷ್ಟು ತಿಂಡಿ.... ಪರಿಸ್ಥಿತಿ ಹೀಗಿರುವಾಗ ನಾವು ತಲೆಗೆ ಎರಡೆರಡು ಚಟಾಕು ಮಾತ್ರ ಅಕ್ಕಿ ಕೊಡಬೇಕಾದ ಗ್ರಹಚಾರವೇನು ಬಂತು ?"

"ಶೇಷಯ್ಯಾ, ನನಗೊಂದು ಅಪೂರ್ವ ಯೋಚನೆ ಹೊಳೆಯಿತು.... ಅಕಸ್ಮಾತ್ತಾಗಿ ......."

"ಅದು ಒಳ್ಳೆಯ ಆಲೋಚನೆಯಾಗಿರಲೆಂದು ಭಗವಂತನನ್ನು ಪ್ರಾರ್ಥಿಸುತ್ತೇನೆ."

"ಕೇಳು ಶೇಷಯ್ಯಾ! ಹೆಸರು ಪ್ರತಿಷ್ಠೆಗಳಗಾಗಿಯಾದರೂ ನಾವು ರೇಷನಿಂಗ್ ಜಾರಿಗೆ ತರಲೇಬೇಕು."

"ಅಯ್ಯೋ, ದೇವರೇ........ಎಲ್ಲಾದರೂ ಬಿದ್ದು ಸಾಯುವೆನು."

"ಕೇಳು, ಕೇಳು........ಹೆಸರಿಗಾಗಿ ನಾವು ರೇಷನಿಂಗ್ ಜಾರಿಗೆ ತರಬೇಕೆಂದಲ್ಲವೇ ನಾನು ಹೇಳಿದ್ದು."

"ಹೌದು, ಮಹಾಸ್ವಾಮಿ........ನಮ್ಮ ಪ್ರಾರಬ್ಧ."

"ತಲೆ ಚಚ್ಚಿಕೋ ಬೇಡ........ಹೆಸರಿಗಾಗಿ ಮಾತ್ರ........ನೆರೆಹೊರೆಯವರ ಮಧ್ಯೆ ತಲೆ ಎತ್ತಿಕೊಂಡು ತಿರುಗಾಡಲು ನಾವು ರೇಷನಿಂಗ್ ಜಾರಿಗೆ ತರುತ್ತಿರುವೆವು .......ಹಾಗೇ ಇದರ ಮುಖಾಂತರ ನಾವು ಬಹಳ ಹೆಸರು ಗಳಿಸಲು ಒಂದು ಅವಕಾಶವಿದೆ ......."

"ನಿಮಗೆ ನಿಜವಾಗಿ ಮತಿಹೋಯಿತು. ಬನ್ನಿ ಮದನಪಲ್ಲಿಗೆ ಹೋಗೋಣ........ಅಲ್ಲಿ ಕೆಲವು ದಿನಗಳಿದ್ದರೆ ನಿಮ್ಮ ಮನಸ್ಸು ಸ್ವಲ್ಪ ಕುದುರುತ್ತದೆ........"

"ಕೇಳು ಶೇಷಯ್ಯಾ........ನಾವು ಎಲ್ಲರ ಹಾಗೆ ರೇಷನಿಂಗ್ ಜಾರಿಗೆ ತರುತ್ತೇವೆ........ಎಲ್ಲರ ಹಾಗೆ ಅಲ್ಲ, ಎಲ್ಲರಿಗಿಂತಲೂ ಚೆನ್ನಾಗಿ, ಸೊಗಸಾಗಿ........"

"ಏನೋ ಹೇಳಿಬಿಡಿ."

"ಈಗ ಎಲ್ಲ ಜಾಗಗಳಲ್ಲಿ ನಡೆಯುತ್ತಿರುವ ರೇಷನಿಂಗ್ ಬಹಳ ಹೊಲಸಾಗಿದೆ........ಮನುಷ್ಯನಿಗೆ ಎರಡೆರಡು ಚಟಾಕಂತೆ........!"

"ನಿಮಗೇಕೆ ಸ್ವಾಮಿ ಆ ವಿಷಯವೆಲ್ಲಾ........

"ಶೇಷಯ್ಯಾ, ಸುಮ್ಮನಿರು. ನಮ್ಮ ಸಂಸ್ಥಾನದಲ್ಲಿ ನಾವು ರೇಷನಿಂಗ್ ಜಾರಿಗೆ ತಂದು ಪ್ರತಿ ವ್ಯಕ್ತಿಗೆ ದಿನಕ್ಕೆ ಒಂದು ಹಿಡಿ ಅಕ್ಕಿ ಮಾತ್ರ ಕೊಡೋಣ........ಅದ್ಭುತವಾಗಿಲ್ಲವೇ ?"

"...................."



# ಆರ್ಥಿಕ ಪುನರ್ನಿರ್ಮಾಣ

"ಶೇಷಯ್ಯಾ!"

"ಪ್ರಭೂ."

"ಈ ಪೇಪರಿನಲ್ಲಿ ಅಚ್ಚಾಗಿರುವ ಆರು ಕಾಲಂ ಉಪನ್ಯಾಸವನ್ನು ಓದಿದೆಯಾ?"

"ನೋಡಲಿಲ್ಲ ಮಹಾಸ್ವಾಮಿ."

"ನಿರ್ಭಾಗ್ಯನೇ! ನೋಡಕೂಡದಾಗಿತ್ತೆ........ಇವೆಲ್ಲಾ ಏನೆಂದು ಕೊಂಡೆ?"

"ಚಿತ್ತ........ಏನೆಂದುಕೊಂಡಿದ್ದೆ........ಪ್ರಭು?"

"ಭದ್ರಪುರದ ದಿವಾನರ ಉಪನ್ಯಾಸ."

"ಚಿತ್ತ."

"ಭದ್ರಪುರ ಸಂಸ್ಥಾನದಲ್ಲಿ ಯುದ್ಧಾನಂತರ ಆರ್ಥಿಕ ಪುನನಿರ್ಮಾಣ ವನ್ನು ಕುರಿತು ಆರ್ಥಿಕ ಮಹಾಸಮ್ಮೇಳನದಲ್ಲಿ ಆತನಿತ್ತ ಭಾಷಣದ ಸಾರಾಂಶವಿದು."

"ಬಹಳ ಸಂತೋಷ ಮಹಾಸ್ವಾಮಿ."

"ಮತ್ತೆ........ಶೇಷಯ್ಯಾ, ನೀನೂ ದರ್ಬಾರ್ ಡ್ರೆಸ್ ಹಾಕಿಕೊಂಡು ತಯಾರಾಗಿರಬೇಕು."

"ಏಕೆ ಮಹಾಪ್ರಭೂ?"

"ಭಯಪಡಬೇಡ....ಯುದ್ಧಾನಂತರ ನಾವು ಜಾರಿಗೆ ತರುವ ಆರ್ಥಿಕ ಪುನರ್ನಿರ್ಮಾಣ........"

"ಬೇಡಿ. ಮಹಾಸ್ವಾಮಿ........ಅಷ್ಟು ದೊಡ್ಡ ದೊಡ್ಡ ಮಾತುಗಳು ನಮಗೆ ಬೇಡ."

“ಶೇಷಯ್ಯಾ........ಚಂಡಿ ಹಿಡಿಯಬೇಡ.”

“ನಮಗೆ ಆ ಭಾಷಣಗಳೂ, ದೊಡ್ಡದೊಡ್ಡ ವಿಷಯಗಳೂ ಬೇಡಿ ದೊರೆಗಳೆ.”

“ಬಿಂಕ ಮಾಡಬೇಡ....ನಿನ್ನ ವಾಕ್‌ಚಾತುರ್ಯವನ್ನು ತೋರಿಸಲು ಇದೀಗ ಸುಸಮಯ ಒದಗಿದೆ.”

“ಏನು ಭಾಷಣ ಮಾಡಲಿ?........ಯಾರ ಮುಂದೆ?”

“ಮೊದಲೇ ಹೇಳಲಿಲ್ಲವೇ?........ಯುದ್ಧಾನಂತರ ಆರ್ಥಿಕ........

“ನಮ್ಮ ಪ್ರಜೆಗಳು ಅಂತಹ ಮಾತುಗಳನ್ನು ಕೇಳಿ ಭಯಪಡುವರು, ಮಹಾಸ್ವಾಮಿ.”

“ಶೇಷಯ್ಯಾ........ನೀನು ಯಾವಾಗಲೂ ಹೀಗೇ ಉತ್ಸಾಹಭಂಗ ಮಾಡುವೆ........”

“ಏನು ಮಾಡಲಿ? ನಮ್ಮ ಪರಿಸ್ಥಿತಿಗಳು ಹಾಗಿವೆ.”

“ನಿನ್ನ ಪರಿಸ್ಥಿತಿಗಳು ಹಾಳಾಗಿ ಹೋಗಲಿ........ಆ ಭದ್ರಪುರದ ದಿವಾನನನ್ನು ನೋಡು, ಪ್ರತಿಯೊಂದು ವಿಷಯಕ್ಕೂ ಒಂದೊಂದು ಗಂಭೀರ ಭಾಷಣ ಹೊಡೆಯುತ್ತಾನೆ........ನಾವು ಎಷ್ಟು ಹಿಂದೆ ಬಿದ್ದಿದ್ದೇವೆ........ ಈ ಜನ್ಮದಲ್ಲಿ, ನೀನು ನಮ್ಮ ಸಂಸ್ಥಾನದ ವಿಚಾರದಲ್ಲಿ ಒಂದು, ಒಂದೇ ಒಂದು ಸಾರಿಯಾದರೂ ಬಾಯಿಬಿಟ್ಟು ಮಾತನಾಡಿರುವೆಯಾ?”

“ಉಪನ್ಯಾಸಗಳನ್ನು ಕೊಡಬೇಕಾದ ಪರಿಸ್ಥಿತಿಗಳೇನೂ ಉಂಟಾಗಿಲ್ಲ ಸ್ವಾಮಿ ಇಲ್ಲಿ. ಎಲ್ಲ ಕೆಲಸಕಾರ್ಯಗಳು ಸುಗಮವಾಗಿ, ಸುಸೂತ್ರವಾಗಿ ನಡೆಯುತ್ತಿವೆ ನಮ್ಮ ಸಂಸ್ಥಾನದಲ್ಲಿ.”

“ಶೇಷಯ್ಯಾ........ಈ ಕೆಲಸಕ್ಕೆ ಬಾರದ ಮಾತುಗಳು ನನ್ನ ಮುಂದೆ ನಡೆಯುವುದಿಲ್ಲ. ನಿನ್ನ ಬುದ್ಧಿವಂತಿಕೆಯನ್ನು ನೋಡಿಯೇ ಬಿಡೋಣ. ನಾಳೆ ಸಂಜೆ ನೀನು ನಮ್ಮ ಕೆರೆಯ ಏರಿಯ ಮೇಲೆ ಎರಡು ಗಂಟೆ ಕಾಲ ಗಂಭೀರವಾದ ಭಾಷಣ ಮಾಡಲೇಬೇಕು.”

“ಅನಿವಾರ್ಯವೇ?”

"ಹೌದು........ಫಲಾನ ಸಂಸ್ಥಾನದ ದಿವಾನರು ಇಷ್ಟು ಗಂಟೆ ಕಾಲ ಭಾಷಣ ಮಾಡಿದರು ಎಂದು ವಾರ್ತಾಪತ್ರಿಕೆಗಳಲ್ಲಿ ಅಚ್ಚಾದರೆ ನೋಡೋಣ ವೆಂದು ಎಷ್ಟೋ ದಿನದಿಂದ ಹಂಬಲ ನನಗೆ."

"ತಾವೇ ಮಾತನಾಡಬಾರದೆ?"

"ದಿವಾನರುಗಳು ಮಾತನಾಡಿದರೆಯೇ ಈ ಪೇಪರುಗಳವರು ಹಾಕು ತ್ತಾರೆ. ರಾಜರ ಮಾತಿನ ಮೇಲೆ ಅವರಿಗೆ ನಂಬಿಕೆಯಿಲ್ಲ."

"ಆಶ್ಚರ್ಯವಾಗಿದೆ ಸ್ವಾಮಿ, ನಿಮ್ಮ ಮಾತು."

"ಆಶ್ಚರ್ಯವೇನಿಲ್ಲ. ಆದರೂ ಸಂಸ್ಥಾನದ ಕಾರ್ಯಭಾರವನ್ನು ವಹಿಸಿರುವಾತ ನೀನು. ಆದ್ದರಿಂದ ನೀನು ಮಾತನಾಡಿದರೇನೇ ಪ್ರಜೆ ಗಳಿಗೂ ನಿನ್ನ ಮೇಲೆ ನಂಬಿಕೆ, ಗೌರವಗಳು ಇರುತ್ತವೆ........ಹೋಗಿ ಉಪನ್ಯಾಸ ಸಿದ್ಧಪಡಿಸಿಕೋ."

"ಯಾವ ವಿಷಯ ಕುರಿತು ಭಾಷಣ ಮಹಾಪ್ರಭೂ."

"ಮತ್ತೆ ಮೊದಲಿಗೇನೆ ಬಂದೆಯಾ? ಇಷ್ಟವಿಲ್ಲದ ನಾಯಿಯನ್ನು ಬೇಟೆಗೆ ಹೋಗುವಂತೆ ಹೇಳಿದ ಹಾಗಾಯಿತು........ನಮ್ಮ ಸಂಸ್ಥಾನದಲ್ಲಿ ಯುದ್ಧಾನಂತರ ನಡೆಯುವ ಆರ್ಥಿಕ ಪುನರ್ನಿರ್ಮಾಣದ ವಿಷಯವನ್ನು ಕುರಿತು, ತಿಳಿಯಿತೇ? ಭದ್ರಪುರದ ದಿವಾನನು ಕೊಟ್ಟ ಭಾಷಣಕ್ಕಿಂತ ದೀರ್ಘವಾಗಿರಬೇಕು."

"ಸರಿ, ಮಹಾಸ್ವಾಮಿ. ಆದರೆ ಮೊದಲು ಪುನರ್ನಿರ್ಮಾಣ ವಿಷಯ ಗಳನ್ನು ಕುರಿತು ನಾವು ತಿಳಿದುಕೊಳ್ಳಬೇಕು."

"ನಿನ್ನ ತಲೆ....ಈಗಲೇ ಅಲ್ಲವೇ ಹೇಳಿದ್ದು........ನಮ್ಮ ಸಂಸ್ಥಾನದ ಆರ್ಥಿಕ ಪರಿಸ್ಥಿತಿಯನ್ನು ಕುರಿತು ಅಂತ........ಅದರ ವಿಷಯ ನಮಗೆ ತಿಳಿಯದಿರುವುದಾದರೂ ಏನಿದೆ?"

"ಏನೂ ತಿಳಿಯದು ಮಹಾಸ್ವಾಮಿ........ಎಲ್ಲಾ ಹೊಸದು."

"ಶೇಷಯ್ಯಾ, ನೀನು ಉಪನ್ಯಾಸ ಕೊಡುವಿಯಾ, ಇಲ್ಲ ಹುಚ್ಚಾ ಸ್ಪತ್ರೆಗೆ ಸೇರ್‍ತಿಯಾ........ ಎರಡೇ ಅವಕಾಶಗಳಿರೋದು........ಯಾವುದಾ ದರೂ ಒಂದನ್ನು ತೀರ್ಮಾನಿಸಿ ಬಿಡು........"

"ಪ್ರಭುಗಳು ಸ್ವಲ್ಪ ಸಹನೆಯಿಂದ ಕೇಳಬೇಕು. ಯಾರಾದರೂ ಆರ್ಥಿಕ ಪುನರ್ನಿರ್ಮಾಣದ ವಿಷಯದಲ್ಲಿ ಕೈಹಾಕುವುದು ಆರ್ಥಿಕ ಪರಿಸ್ಥಿತಿ ಹದಗೆಟ್ಟಿರುವಾಗ........ಖಜಾನೆಯಲ್ಲಿ ಕಾಸಿಲ್ಲದಿರುವಾಗ........"

"ಶೇಷಯ್ಯಾ, ಉಪನ್ಯಾಸ ತಯಾರು ಮಾಡಿಕೊಳ್ಳುವಂತೆ ಹೇಳಿದರೆ ನಗುನಗುತ್ತಾ ಹೋಗದೆ, ಈ ಕುಶಂಕೆಗಳು ಏಕೆ?"

"ನಾವು ಭಾಷಣ ಮಾಡುವುದರಲ್ಲಿ ತಕ್ಕಷ್ಟು ಔಚಿತ್ಯವಿರಬೇಕು. ನಮ್ಮ ಸಂಸ್ಥಾನದಲ್ಲಿ ಆರ್ಥಿಕ ಪರಿಸ್ಥಿತಿ ಚೆನ್ನಾಗಿರುವಾಗ ಈ ಕಾರ್ಯಕ್ರಮ ......."

"ಶೇಷಯ್ಯಾ, ನಿನ್ನ ಮುಖಕ್ಕೆ........ಆ ಭದ್ರಪುರದ ದಿವಾನನನ್ನು ನೋಡು........ಆತನನ್ನು ನೋಡಿಯಾದರೂ ಕಲಿತುಕೋ........"

"ಅವರ ಸಂಸ್ಥಾನ ಸಾಲದಲ್ಲಿ ಮುಳುಗಿಹೋಗಿದೆ."

"ಆದ್ದರಿಂದ ಆತ ಇಷ್ಟು ದೊಡ್ಡ ಉಪನ್ಯಾಸ ಕೊಟ್ಟನೆ?"

"ಅಷ್ಟೇ. ಆ ಸಾಲಗಳನ್ನು ತೀರಿಸಲು, ಕಂದಾಯ, ತೆರಿಗೆಗಳನ್ನು ಹೆಚ್ಚುಮಾಡಿ, ಪ್ರಜೆಗಳಿಂದ ಅನೇಕ ರೀತಿಯಲ್ಲಿ ಹಣ ವಸೂಲುಮಾಡಿ, ಆ ತರುವಾಯ ಮತ್ತೆ ಅವರ ಪರಿಸ್ಥಿತಿ ಸ್ಥಿಮಿತಕ್ಕೆ ತರುವೆನೆನ್ನುವನು."

"ಹಾಂ, ಏನೆಂದೆ? ಹುಷಾರ್, ಭದ್ರಪುರದ ದಿವಾನನು ಈ ಮಾತುಗಳನ್ನು ಕೇಳಿದನೆಂದರೆ ನಿನ್ನ ತಲೆ ಉರುಳಿಸಿಬಿಡ್ತಾನೆ."

"ತಮಗೆ ತಿಳಿದಿದೆ........ನಮಗೂ ಭದ್ರಪುರದವರಿಗೂ ಇರುವ ಭೇದ. ನಮ್ಮ ಸಂಸ್ಥಾನವು ಮತ್ತೊಬ್ಬರಿಗೆ ಸಮಯ ಬಿದ್ದಾಗ ಸಹಾಯ ಮಾಡಿತೇ ಹೊರತು, ಎಂದೂ ಇನ್ನೊಬ್ಬರಿಗೆ ಋಣಿಯಾಗಿರಲಿಲ್ಲ. ನಾವು ತೆರಿಗೆ, ಕಂದಾಯಗಳನ್ನು ಹೆಚ್ಚಿಸಿ ಪ್ರಜೆಗಳ ಪ್ರಾಣ ಹಿಂಡಲಿಲ್ಲ. ನಮ್ಮ ಆರ್ಥಿಕ ಪರಿಸ್ಥಿತಿ ಮೊದಲನೇ ತರಗತಿಯದಾಗಿದೆ. ಆದ್ದರಿಂದ ನಾವು ಯಾವ ಉಪನ್ಯಾಸವನ್ನೂ ಕೊಡಬೇಕಾಗಿಲ್ಲ........"

"ಶೇಷಯ್ಯಾ, ನೀನು ನನ್ನೊಂದಿಗೆ, ನನ್ನ ರಾಜ್ಯಭಾರದೊಂದಿಗೆ ಸಹಾಯ ನಿರಾಕರಣೆಗೆ ಇಳಿದಿರುವೆ. ಇನ್ನು ನಿನ್ನ ಮಾತುಗಳನ್ನು ಕೇಳಿ ನಾನು ಮೋಸ ಹೋಗುವುದಿಲ್ಲ. ನೀನು ಈವರೆವಿಗೂ ಒಂದು ಸಾರಿಯಾ

ದರೂ ನಮ್ಮ ಸಂಸ್ಥಾನದ ವಿಷಯ ಕುರಿತು ಉಪನ್ಯಾಸ ಮಾಡಿಲ್ಲ. ನಮ್ಮ ಸಂಸ್ಥಾನದ ವಿಷಯ ಪ್ರಪಂಚವಾಗಲಿ, ಪತ್ರಿಕೆಗಳಾಗಲೀ ಗುರ್ತಿಸಿಲ್ಲ. ಈ ಪರಿಸ್ಥಿತಿಗೆ ನೀನೇ ಕಾರಣ........ನಿನ್ನ ಸಣ್ಣತಲೆ........ಇನ್ನು ನಾನು ಸಹಿಸ ಲಾರೆ."

"ಪ್ರಭೂ, ದುರಾಗ್ರಹ ಬೇಡ........ಏನು ಮಾಡಬೇಕೋ ತಿಳಿಸಿ ದಲ್ಲಿ........"

"ಹೇಳಿದರೆ ಮಾಡುವಿಯಾ ?"

"ಅಗತ್ಯವಾಗಿ."

"ಯುದ್ಧಾನಂತರ ನಾವೂ ಸಹ ಎಲ್ಲ ಸಂಸ್ಥಾನಾಧೀಶರಂತೆ ಆರ್ಥಿಕ ಪುನರ್ನಿರ್ಮಾಣ ಕಾರ್ಯವನ್ನು ಕೈಗೊಳ್ಳುತ್ತಿರುವೆವೆಂದು, ಪ್ರಪಂಚ ಕ್ಕೆಲ್ಲಾ ಕೇಳಿಸುವ ಹಾಗೆ ಡಂಗುರ ಹೊಡೆಯಬೇಕು. ಅದಕ್ಕೆ ನೀನು ಒಂದು ಗಂಭೀರವಾದ ಉಪನ್ಯಾಸ ಕೊಡಬೇಕು........"

"ಇದು ಅನಿವಾರ್ಯವೇ ಆದರೆ........"

"ಅನಿವಾರ್ಯ. ನೀನು ಊಟ ಮಾಡುವುದು ಎಷ್ಟು ಅನಿ ವಾರ್ಯವೋ, ನಿದ್ದೆಮಾಡುವುದು ಎಷ್ಟು ಅನಿವಾರ್ಯವೋ ಅಷ್ಟೇ ಅನಿವಾರ್ಯ. ನಾಳೆ ನೀನು ದರ್ಬಾರ್ ಡ್ರೆಸ್ ಹಾಕಿಕೊಂಡು ಕೆರೆಯ ಏರಿಯ ಮೇಲೆ ಹಾಜರಿರಬೇಕು. ನಾನು ನಿನಗೆ ಹೂವಿನ ಹಾರವನ್ನು ಹಾಕುತ್ತೇನೆ."

"ಮಹಾ ಪ್ರಸಾದ........ಪ್ರಭುವರ್ಯರ ಆಜ್ಞೆಯಾದರೆ........"

"ಇನ್ನು ಮಾತನಾಡಬೇಡ........ಅಷ್ಟೇ."

"ಕೂಡಲೇ ಒಂದು ಡಜ಼ನ್ ಗೂಂಡಾಗಳಿಗೆ ವಾರ್ತೆ ಕಳುಹಿಸಿ."

"ಏಕೆ ?"

"ಭದ್ರಪುರದ ಸಂಸ್ಥಾನದಲ್ಲಿರುವಂತಹ ಪರಿಸ್ಥಿತಿಗಳನ್ನು ಇಪ್ಪ ತ್ನಾಲ್ಕು ಗಂಟೆಗಳಲ್ಲಿ – ಅಂದರೆ, ನಾನು ನಾಳೆ ಉಪನ್ಯಾಸ ಕೊಡುವುದ ರೊಳಗೆ ನಮ್ಮ ಸಂಸ್ಥಾನದಲ್ಲೂ ಏರ್ಪಡಿಸಲು."



# ಸಂಪು

"ಶೇಷಯ್ಯಾ!"

"ಸುಪ್ರಭಾತ........ಪ್ರಭೂ."

"ನೋಡಿದೆಯಾ........ಪೇಪರ್‌ನಲ್ಲಿ."

"ಏನು ಸ್ವಾಮಿ ಅದು."

"ಮದರಾಸಿನಲ್ಲಿ ಜಾಡಮಾಲಿಗಳು ಮುಷ್ಕರ ಹೂಡಿದಾರಂತೆ....!"

"ಇರಬಹುದು ಮಹಾಸ್ವಾಮಿ."

"ಜಾಡಮಾಲಿಗಳು!"

"ಚಿತ್ತ."

"ತಮ್ಮ ಹಕ್ಕುಗಳನ್ನು ತಾವು ಸಂರಕ್ಷಿಸಿಕೊಳ್ಳಲು!"

"ಚಿತ್ತ."

"ಡಾಕ್ಟರುಗಳು, ಪ್ಲೀಡರುಗಳು, ರಾಜಕಾರಣಪಟುಗಳು, ಜರ್ನಲಿಸ್ಟುಗಳು ಮಾಡಲಾರದ ಕೆಲಸವನ್ನು........"

"ಚಿತ್ತ."

"ಈ ಜಾಡಮಾಲಿಗಳು ಮಾಡಿದ್ದಾರೆ."

"ಚಿತ್ತ........ಮಾಡಿದ್ದಾರೆ."

"ನಮ್ಮ ರಾಜ್ಯದಲ್ಲಿ ಯಾವಾಗಲಾದರೂ ಯಾರಾದರೂ ಸಂಪು ಹೂಡಿವರೇನು?"

"ಇಲ್ಲ........ಪ್ರಭುಗಳ ಆಳ್ವಿಕೆಯಲ್ಲಿ ಅಂತಹ........"

"ಯಾರೂ, ಎಂದೂ ಸಂಪು ಹೂಡಲಿಲ್ಲವೇ ನಮ್ಮ ಸಂಸ್ಥಾನದಲ್ಲಿ?"

"ಇಲ್ಲ ಪ್ರಭೂ. ಇಲ್ಲಿ ಯಾರೂ ಮುಷ್ಕರ ಹೂಡಬೇಕಾದ ಅಗತ್ಯವಿಲ್ಲ. ಪ್ರಭುಗಳ ಪರಿಪಾಲನೆಯಲ್ಲಿ ಅಂತಹ ಕೆಲಸ......."

"ಶೇಷಯ್ಯಾ!"

"ಮಹಾಪ್ರಭೂ."

"ಎಷ್ಟು ಅಪ್ರತಿಷ್ಠೆ ನಮಗೆ........"

"ಪ್ರಭೂ, ಮತ್ತೆ ತಮ್ಮ ತಲೆಯಲ್ಲಿ ಏನೋ ಸರಿದಾಡಲು ಪ್ರಾರಂಭ ವಾಯಿತು."

"ಶೇಷಯ್ಯಾ, ನಮ್ಮ ಸಂಸ್ಥಾನದಲ್ಲಿ ಈವರೆವಿಗೂ ಒಂದು ಸಾರಿ ಯಾದರೂ ಸಂಪು ನಡೆಯಲಿಲ್ಲವೆಂದು ಹೇಳುತ್ತಿರುವೆ........"

"ನಿಜ ನನ್ನೊಡೆಯಾ, ನಡೆಯಲಿಲ್ಲ........"

"ಎಷ್ಟು ಹಿಂದೆ ಬಿದ್ದಿದ್ದೇವೆ ನಾವು........"

"ನಾವೇನೂ ಹಿಂದೆ ಬಿದ್ದಿಲ್ಲವಲ್ಲಾ ಮಹಾಸ್ವಾಮಿ."

"ಶೇಷಯ್ಯಾ, ಎಂಥಾ ಮಾತು ಆಡಿದೆ........ನಿನ್ನ ಮುಖ ನನಗೆ ತೋರಿಸಬೇಡ........"

"ಪ್ರಭುಗಳಿಗಿಷ್ಟು ಆಗ್ರಹ."

"ಶೇಷಯ್ಯಾ, ಯಾಕಯ್ಯಾ ನಮ್ಮ ಸಂಸ್ಥಾನದಲ್ಲಿ ಸಂಪುಗಳು ನಡೆಯಲಿಲ್ಲ."

"ಚಿತ್ತ. ಇಲ್ಲಿ ಕಾರ್ಮಿಕರು ತೃಪ್ತಿಯಾಗಿದ್ದಾರೆ........ಅವರಿಗೆ ತಮ್ಮ ಯಜಮಾನರ ಮೇಲೆ ಯಾವ ವಿಧವಾದ ಅಸಮಾಧಾನವಿಲ್ಲ........"

"ಶೇಷಯ್ಯಾ, ನನಗೆ ಅಳು ಬರುತ್ತಿದೆ. ಈ ಪರಿಸ್ಥಿತಿಗಳನ್ನು ನೆನೆಸಿ ಕೊಂಡರೆ ಯಾವೊಬ್ಬ ಸ್ತ್ರೀಯಾದರೂ ತನ್ನ ಗಂಡನ ಮೇಲಾದರೂ ಸಂಪು ಹೂಡಲಿಲ್ಲವೇ?"

"ಮಾಡಬೇಕಾದ ಅವಶ್ಯಕತೆ ಇಲ್ಲವಾಯಿತು, ತಮ್ಮ ಸಂಸ್ಥಾನ ದಲ್ಲಿ, ತಮ್ಮ ಆಳ್ವಿಕೆಯಲ್ಲಿ ......."

"ಅನಿಷ್ಟ! ಪ್ರಪಂಚದಲ್ಲೆಲ್ಲಾ ಬಿರುಸಾಗಿ ಸಂಪುಗಳು ನಡೆಯು ತ್ತಿದ್ದರೆ........ಕಾರ್ಮಿಕರೂ, ಕಾರ್ಮಿಕ ನಾಯಕರೂ ಕೈಕೈ ಹಿಡಿದು ಕೊಂಡು ಪ್ರಗತಿಪರವಾಗಿ ಮುಂದೆ ಸಾಗುತ್ತಿದ್ದರೆ........ಇಂತಹ ಊರಿನಲ್ಲಿ ಇಂತಹ ಸಂಘಗಳು ಸಂಪು ನಡೆಸಿದವೆಂದು ದಪ್ಪ ಅಕ್ಷರಗಳಲ್ಲಿ ಪೇಪರು

ಗಳಲ್ಲಿ ಹಾಕಿಸಿಕೊಳ್ಳುತ್ತಿದ್ದರೆ........ನಾವು........ಹೀಗೆ........ಶೇಷಯ್ಯಾ, ತಡೆಯಲಾರೆ........ತಡೆಯಲಾರೆ."

"ಪ್ರಭೂ."

"ಶೇಷಯ್ಯಾ, ಇನ್ನು ಮುಂದೆ ನಮ್ಮ ಸಂಸ್ಥಾನವು ಎಲ್ಲ ವಿಷಯ ಗಳಲ್ಲೂ ಪ್ರಗತಿಪರವಾಗಿರಬೇಕು. ಒಂದು ಮುಷ್ಕರವೂ ನಮ್ಮ ಸಂಸ್ಥಾನ ದಲ್ಲಿ ನಡೆಯಲಿಲ್ಲವೆಂದರೆ ನನಗೆ ಬಹಳ ನಾಚಿಕೆಯಾಗುತ್ತಿದೆ."

"ಜ್ಞಾಪಕಕ್ಕೆ ಬಂತು....ಮೂರು ವರ್ಷಗಳ ಹಿಂದೆ ನಮ್ಮ ಸಂಸ್ಥಾನ ದಲ್ಲಿ ಒಂದು ಬ್ರಹ್ಮಾಂಡವಾದ ಸಂಪು ನಡೆಯಿತು."

"ನಡೆಯಿತೇ? ಹೌದೇ ಶೇಷಯ್ಯಾ! ನಿಜವಾಗಿ ನಡೆಯಿತೇ?"

"ನಡೆಯಿತು ಮಹಾಪ್ರಭೂ! ಇಲ್ಲಿಗೆ ಆರು ಮೈಲಿ ದೂರದಲ್ಲಿ ಒಂದೂರಿನಲ್ಲಿ ಬೆಂಕಿ ಬಿದ್ದಾಗ ನಮ್ಮ ಫೈರ್ ಇಂಜನ್ನಿಗಾಗಿ ಹೇಳಿ ಕಳುಹಿಸಿದರು."

"ಊಂ. ತರುವಾಯ........"

"ಫೈರ್ ಇಂಜಿನ್ ಕೂಡಲೇ ಸಂಪು ಹೂಡಿ ಷೆಡ್‌ನಿಂದ ಹೊರಗೆ ಬರಲೇ ಇಲ್ಲ, ಮಹಾಸ್ವಾಮಿ."

"ಊಂ, ಊಂ."

"ಆ ತರುವಾಯ ಅದರ ಕನಿಷ್ಟ ಬೇಡಿಕೆಗಳೇನೋ ಕೇಳಿ ತಿಳಿದು ಕೊಂಡು ಅದರ ಭಾಗಗಳಿಗೆ ಇಷ್ಟು ಎಣ್ಣೆಸುರಿದು, ತಲೆಸವರಿ........"

"ಊಂ, ಊಂ."

"ಆಗ ಅದು ಸಂಪು ಮಾಡುವುದನ್ನು ನಿಲ್ಲಿಸಿ, ಬೆಂಕಿ ಆರಿಸಲು ಹೊರಟಿತು........ಆರು ತಿಂಗಳಿಗೆ!"

"ಶೇಷಯ್ಯಾ, ಹಾಗಾದರೆ ನಮ್ಮ ಗೌರವವು ಸ್ವಲ್ಪ ಉಳಿಯಿತು ಆದರೆ ಅದೇನು ಮಹಾ ದೊಡ್ಡ ಮುಷ್ಕರ........"

"ದೊಡ್ಡದೋ, ಚಿಕ್ಕದೋ ಯಾವುದೋ ನಡೆಯಿತು ನಮ್ಮ ಸಂಸ್ಥಾನದ ಅನೇಕ ಪತ್ರಿಕೆಗಳಲ್ಲಿ ಈ ಸುದ್ದಿ ಪ್ರಕಟವಾಯಿತು."

"ಶೇಷಯ್ಯಾ, ನೀನು ಹೇಳಿದ್ದು ನಿಜವೇ ಆಗಿರಬಹುದು. ಆದರೆ ಅದು ಮೂರು ವರ್ಷಗಳ ಹಿಂದಿನ ಮಾತು. ನಮ್ಮ ಸಂಸ್ಥಾನದಲ್ಲಿ ಆಧುನಿಕ ರೀತಿಯಲ್ಲಿ ಈ ಕಾಲದಲ್ಲಿ ಸಂಪು ನಡೆಯಬೇಕು........"

"ಯಾರು ಮಾಡ್ತಾರೆ ಸ್ವಾಮಿ ಈಗ....ಎಲ್ಲರೂ ಸುಖವಾಗಿದ್ದಾರೆ."

"ಯಾರೋ ಒಬ್ಬರು ಮಾಡಿಯೇ ತೀರಬೇಕು. ಆ ವಾರ್ತೆ ಪೇಪರುಗಳಲ್ಲಿ ಹಾಕಿಸಬೇಕು........ಯೋಚನೆ ಮಾಡು."

"ಚಿತ್ತ........ವಿನಾಕಾರಣ ಮಾಡೆಂದರೆ ಯಾರು ಮಾಡ್ತಾರೆ ಸ್ವಾಮಿ, ........ಯಾರೂ ಅದಕ್ಕೆ ಒಪ್ಪಿಕೊಳ್ಳುವುದಿಲ್ಲ."

"ಶೇಷಯ್ಯಾ, ಯಾರೂ ಮುಷ್ಕರ ಹೂಡಲು ಒಪ್ಪುವುದಿಲ್ಲವೇ?"

"ಒಪ್ಪಿಕೊಳ್ಳಲಾರರು ಸ್ವಾಮಿ."

"ಯಾರ ಹತ್ತಿರಲೂ– ಒಂದು ಗುಬ್ಬಚ್ಚಿ ಕೈಯಲ್ಲೂ ಸಂಪು ಮಾಡಿಸುವ ಶಕ್ತಿ ನಿನಗಿಲ್ಲವೇ?"

"ಇಲ್ಲಾ ಸ್ವಾಮಿ, ಲಾಭವಿಲ್ಲ. ಯಾರೂ ಸುಮ್ಮನೆ ಸಂಪು ಮಾಡುವುದಿಲ್ಲ."

"ಶೇಷಯ್ಯಾ, ನೋಡು ಹಾಗಾದರೆ........"

"ಪ್ರಭೂ, ಯಾಕೆ ಹಾಗೆ ಗಡಿಬಿಡಿಯಿಂದ ಏಳುತ್ತಿರುವಿರಿ........"

"ಶೇಷಯ್ಯಾ, ಈ ನಿಮಿಷದಿಂದ ನಾನು– ಎಂದರೆ ನಿಮ್ಮ ರಾಜ– ಸಂಪು ಹೂಡುತ್ತೇನೆ. ಇಂದಿನಿಂದ ನಾನೀ ಹಾಳು ಸಂಸ್ಥಾನವನ್ನು ಪಾಲಿಸುವುದಿಲ್ಲ........ಹೋಗು!"

# ಯುದ್ಧಾನಂತರ....

"ಶೇಷಯ್ಯಾ"

"ಪ್ರಭೂ."

"ನಾವು ಶುದ್ಧ ತಿಳಿಗೇಡಿಗಳು........"

"ಚಿತ್ತ........ಪ್ರಭುಗಳ ಮಾತಿಗೆ ವ್ಯತಿರಕ್ತವಾಗಿ ಆಡಬಲ್ಲವೇ ?"

"ಪ್ರಪಂಚದಲ್ಲಿ ತಲೆಯ ಮೇಲೆ ಕೂದಲು ಇಲ್ಲದವರೆಲ್ಲರೂ ಯುದ್ಧಾನಂತರ ವಿಷಯಗಳನ್ನು ಹೇಳಿಕೊಳ್ಳುತ್ತಿದ್ದರೆ ನಾವು........?"

"ಚಿತ್ತ........ನಾವು ?"

"ನಾವು ಹುಚ್ಚುತಿಳಿಗೇಡಿಗಳ ಹಾಗೆ ಸುಮ್ಮನಿದ್ದೇವೆ."

"ಸುಮ್ಮನಿರಬೇಕಾಗಿಲ್ಲ ಸ್ವಾಮಿ. ನಾವೂ ಏನಾದರೂ ಮಾಡೋಣ."

"ಮಾಡಬೇಡವೇ ಮತ್ತೆ. ಮಾಡದೆ ಸುಮ್ಮನಿರುತ್ತೇವೆಯೇ ?........ ಏನು ಶೇಷಯ್ಯ ?"

"ಸುಮ್ಮನಿರೋಲ್ಲ ಸ್ವಾಮಿ .......ಮಾಡಿ ಮುಗಿಸುತ್ತೇವೆ........"

"ರೈಟ್. ಹಾಗೆ ಪ್ರೋತ್ಸಾಹ ಕೊಡುವವರನ್ನು ಕಂಡರೆ ನನಗೆ........"

"ತಮ್ಮ ದಯೆ........"

"ಶೇಷಯ್ಯಾ!"

"ಪ್ರಭೂ."

"ಈ ಪುಸ್ತಕ ನೋಡಿದೆಯಾ ?"

"ಚಿತ್ತ........ಕಾಣಿಸುತ್ತಿದೆ ಮಹಾಸ್ವಾಮಿ!"

"ಇದರಲ್ಲಿ ನಮ್ಮ ಸಂಸ್ಥಾನದಲ್ಲಿ ಮಾಡಬೇಕಾದ ಯುದ್ಧಾನಂತರ ಕಾರ್ಯಕ್ರಮಗಳನ್ನು ವಿವರಿಸಿದೆ."

"ಚಿತ್ತ."

"ಉದಾಹರಣೆಗಾಗಿ ಕೆಲವು ಕಾರ್ಯಕ್ರಮಗಳನ್ನು ಕೇಳುವಿಯಾ? ಇವೆಲ್ಲವನ್ನೂ ನಾನೇ ಶ್ರಮವಹಿಸಿ ಬರೆದೆ........"

"ಆ ಪುಸ್ತಕದ ಬೈಂಡು ಬಹಳ ಚೆನ್ನಾಗಿದೆ ಸ್ವಾಮಿ........ಉದಾ ಬೈಂಡು, ಗಿಲ್ಟು ಅಕ್ಷರಗಳೂ........"

"ಇನ್ನೂ ಏನು ನೋಡಿದೆ. ಒಳಗೆಲ್ಲಾ ಬಂಗಾರದ ಮಸಿಯಲ್ಲಿ ಬರೆದಿದ್ದೇನೆ ನಮ್ಮ ಮುಂದಿನ ಕಾರ್ಯಕ್ರಮಗಳನ್ನು........ನೋಡು."

"ಪ್ರಭೂ, ದಿವ್ಯವಾಗಿದೆ."

"ಬರವಣಿಗೆ ಸ್ಪಷ್ಟವಾಗಿದೆಯೋ?"

"ಮುತ್ತಿನಸರದ ಹಾಗಿದೆ ತಮ್ಮ ಬರವಣಿಗೆ."

"ಇದನ್ನು ನಾವು ಅಚ್ಚುಹಾಕಿಸೋಣ."

"ತಪ್ಪದೆ."

"ಅದು ಯುದ್ಧಾನಂತರ ವಿಷಯ. ಈಗ ಕಾಗದ ಗೀಗದ– ಸಿಕ್ಕುವುದಿಲ್ಲ........"

"ಚಿತ್ತ........ಹಾಗೇ ಆಗಬಹುದು ಮಹಾಸ್ವಾಮಿ."

"ಇನ್ನು ಕಾರ್ಯಕ್ರಮಗಳನ್ನು ಕೇಳು."

"ಕೇಳುತ್ತಿದ್ದೇನೆ ಸ್ವಾಮಿ."

"ಮೊಟ್ಟಮೊದಲನೇ ಕಾರ್ಯಕ್ರಮ – ಯುದ್ಧಾನಂತರ ನಮ್ಮ ಸಂಸ್ಥಾನದಲ್ಲಿ ಕೆಲಸಮಾಡುವವರಿಗೆಲ್ಲಾ ಸರಿಯಾಗಿ ಮೊದಲನೇ ತಾರೀಖಿನ ದಿನ ಸಂಬಳ ಸಿಕ್ಕುವ ಹಾಗೆ ಮಾಡುವೆವು........"

"ಭೇಷ್, ಬಹಳ ಚೆನ್ನಾಗಿದೆ."

"ಭಯಪಡಬೇಡ ಶೇಷಯ್ಯಾ, ನಿನ್ನೊಬ್ಬನಿಗೆ ಮಾತ್ರ ಈ ತಿಂಗಳಿಂದಲೇ ಮೊದಲನೇ ತಾರೀಖು ಸಂಬಳ ಕೊಡಿಸ್ತೇನೆ."

"ಚಿತ್ತ........ಧನ್ಯನಾದೆ."

"ಮತ್ತೆ – ಎರಡನೇ ಐಟಂ – ಅದೇನು ಶೇಷಯ್ಯ ತೂಕಡಿಸುತ್ತಿರುವೆ?"

"ಇಲ್ಲಾ ಸ್ವಾಮಿ, ರಾತ್ರಿ ಸರಿಯಾಗಿ ನಿದ್ರೆಮಾಡಲಿಲ್ಲ........"

"ಸರಿ, ಕೇಳು. ಸ್ವಲ್ಪವೇ ಇದೆ....ಎರಡನೇ ಕಾರ್ಯಕ್ರಮ. ಯುದ್ಧಾ

ನಂತರ ನಮ್ಮ ಸಂಸ್ಥಾನದಲ್ಲಿ ಪ್ರತಿ ವ್ಯಕ್ತಿಯೂ ಎರಡು ಹೊತ್ತು ಊಟ ಮಾಡಬಹುದು."

"ಭೇಷ್, ಬಹಳ ಸೊಗಸಾಗಿದೆ."

"ಮೂರನೇಯದು – ಕೇಳು ಶೇಷಯ್ಯಾ – ಯುದ್ಧಾನಂತರ ನಾವು ಒಂದು ವಿಮಾನ ಕೊಂಡುಕೊಳ್ಳುವೆವು."

"ಬಾಂಬರೇನು ಮಹಾಸ್ವಾಮಿ."

"ಹೌದು, ಬಾಂಬರ್. ಅದರಲ್ಲಿ ನಮ್ಮ ಅಮಾತ್ಯಶೇಖರರಿಗೂ ಒಂದು ಸೀಟು ರಿಸರ್ವ್ ಮಾಡೋಣವಾಗುತ್ತದೆ."

"ಪ್ರಭೂ, ಧನ್ಯನಾದೆ."

"ಶೇಷಯ್ಯಾ, ಇನ್ನೊಂದು ಕಾರ್ಯಕ್ರಮ ಓದಿ ಇಂದಿಗೆ ನಿಲ್ಲಿಸುತ್ತೇನೆ. ನಿನಗೆ ನಿದ್ರೆ ಬರುತ್ತಿರುವ ಹಾಗೆ ಕಾಣಿಸುತ್ತದೆ....ಅದೇನೆಂದರೆ, ಶೇಷಯ್ಯಾ, ಯುದ್ಧಾನಂತರ ನಮ್ಮ ಸಂಸ್ಥಾನದಲ್ಲೆಲ್ಲಾ ಎಲಿಮೆಂಟರೀ ಸ್ಕೂಲುಗಳನ್ನು ಸ್ಥಾಪಿಸಿ ಪ್ರಜೆಗಳಿಗೆ ವಿದ್ಯೆಯನ್ನು ಕಲಿಸೋಣ. ಆ ಸ್ಕೂಲುಗಳಿಗೆಲ್ಲಾ ಸೂಪರ್‌ವೈಸರ್ ಆಗಿ ನಿಮ್ಮ ಹಿರಿಯ ಮಗನನ್ನು ನೇಮಿಸೋಣ."

"ಚಿತ್ತ........ತಮ್ಮ ಅನುಗ್ರಹ........ಧನ್ಯನಾದೆ."

"ಶೇಷಯ್ಯ, ಈ ಪುಸ್ತಕದಲ್ಲಿ ಇನ್ನೂ ಇಂತಹ ಕಾರ್ಯಕ್ರಮಗಳೆಷ್ಟೋ ಇವೆ. ನಿನಗೂ ಏನಾದರೂ ಹೊಳೆದರೆ........"

"ಪ್ರಭೂ, ನನ್ನ ಕಣ್ಣಮುಂದೆ ಒಂದು ದೊಡ್ಡ ಕಾರ್ಯಕ್ರಮ ನಾಟ್ಯವಾಡುತ್ತಿದೆ........"

"ನಿಜವೇ ಶೇಷಯ್ಯಾ? ಅದೇನೋ ಹೇಳು........"

"ಪ್ರಭೂ, ಯುದ್ಧಾನಂತರ ನಾವು........"

"ಹೇಳು ಶೇಷಯ್ಯ........ಏನದು?"

"ಪ್ರಭೂ, ಬರೆದುಕೊಳ್ಳಿ ಆ ಪುಸ್ತಕದಲ್ಲಿ........ಯುದ್ಧಾನಂತರ ನಾವು ಮರಣ ಹೊಂದುವೆವು........"

# ಹೊಸ ಸಲಹೆಗಾರನ ನಿಯಾಮಕ

"ಶೇಷಯ್ಯಾ!"

"ಪ್ರಭೂ."

"ಯಾರಯ್ಯಾ ಆ ಆಸಾಮಿ."

"ಚಿತ್ತ. ಬೊಂಬಾಯಿಯಿಂದ ಬಂದಿರುವನಂತೆ. ಯಾವುದೋ ಟಾಯಿಲೆಟ್ ಸಾಮಾನುಗಳೂ, ಸೋಪುಗಳೂ ತಯಾರುಮಾಡುವ ಕಂಪೆನಿಯ ಏಜೆಂಟಂತೆ."

"ಏನಂತೆ ಆತ ಹೇಳುವುದು?"

"ತಮ್ಮ ಕಂಪೆನಿಯ ಸರಕುಗಳನ್ನು ಪ್ರೋತ್ಸಾಹಿಸುವಂತೆ ತಮ್ಮನ್ನು ಬೇಡಿಕೊಳ್ಳಲು ಬಂದಿರುವನಂತೆ."

"ಯಾವುದೋ ಆ ಸರಕುಗಳು........ನೋಡದೆ, ಅವು ನಮಗೆ ಬೇಕೋ ಇಲ್ಲವೋ ತಿಳಿದುಕೊಳ್ಳದೆ........"

"ಚಿತ್ತ........ಈ ಲೆದರ್‌ಕೇಸ್ ತುಂಬಾ ಸ್ಯಾಂಪಲ್ಸ್ ತೆಗೆದುಕೊಂಡು ಬಂದಿರುವನಂತೆ, ತಮಗೆ ತೋರಿಸುವ ಸಲುವಾಗಿ........"

"ಎಲ್ಲಿ........ತೋರಿಸಹೇಳು."

* * *

"ಇವು ಮುಖ್ಯವಾಗಿ ಮಹಾರಾಣಿಯವರಿಗೆ ಅವಶ್ಯಕವೆಂತಲೂ, ದೇವಿಯವರೇ ನೋಡಿ ಪರೀಕ್ಷೆ ಮಾಡಬೇಕೆಂತಲೂ ಹೇಳುತ್ತಿರುವನು ಮಹಾಸ್ವಾಮಿ."

"ಅಂದರೆ ನನಗೆ ಕೆಲಸಕ್ಕೆ ಬರುವಂತಹ ಸರಕುಗಳಿಲ್ಲವೆಂದಾಯಿತು ಆತನ ಹತ್ತಿರ."

"ಮಹಾಪ್ರಭುಗಳಿಗೂ ಕೆಲಸಕ್ಕೆ ಬರುತ್ತವೆ........ಆದರೆ, ಇವನ್ನು ಮುಖ್ಯವಾಗಿ ಸ್ತ್ರೀಯರು ತಮ್ಮ ಅಂದಚೆಂದಗಳನ್ನು ಇಮ್ಮಡಿಸಲು ಉಪ ಯೋಗಿಸುತ್ತಾರೆ........ಮಹಾರಾಣಿಯವರಿಗೆ ಒಂದು ವಾರ್ತೆ ಕಳುಹಿಸು ತ್ತೇನೆ........ಅವರೇ ಬಂದು ನೋಡುವರು........"

*　　　*　　　*

"ಶೇಷಯ್ಯಾ, ಮಹಾರಾಣಿಯವರು ಬಂದರು........ಎಲ್ಲಿ, ಪೆಟ್ಟಿಗೆ ತೆಗೆಯುವಂತೆ ಹೇಳು....ನಾವಿಬ್ಬರೂ ಜೊತೆಯಲ್ಲೇ ನೋಡುವೆವು........"

"ಚಿತ್ತ."

"ಅದೇನದು ?"

"ದೇವಿಯವರು ಉಪಯೋಗಿಸಬೇಕಾದ ಆರು ಲೇಪನಗಳಲ್ಲಿ ಇದು ಮೊದಲನೇಯದೆಂದು ಹೇಳುತ್ತಿದ್ದಾನೆ ಮಹಾಸ್ವಾಮಿ, ಏಜೆಂಟು........"

"ಓಹೋ........"

"ಇದು ಸ್ವಲ್ಪ ಜಿಡ್ಡಾಗಿರುತ್ತದಂತೆ ಮಹಾಸ್ವಾಮಿ........ಇದನ್ನು ಕೋಲ್ಡ್ ಕ್ರೀಂ ಎಂದು ಕರೆಯುವರಂತೆ. ಇದು ರಾತ್ರಿ ಮಲಗುವ ಮೊದಲು ಮುಖಕ್ಕೆ ಹಚ್ಚಿಕೊಳ್ಳುವರಂತೆ ಸೌಂದರ್ಯವತಿಯರು........"

"ಸೌಂದರ್ಯವತಿಯರು ........ ಹೌದು ........ದೇವಿ ಸೌಂದರ್ಯ ವಂತಳು........ಅಲ್ಲವೇ ಶೇಷಯ್ಯಾ ?"

"ಚಿತ್ತ........ಚಿತ್ತ........ಅಲ್ಲವೆಂದು ಯಾರು ಹೇಳಿದರು ಮಹಾ ಪ್ರಭೂ."

"ಸರಿ........ಆಮೇಲೆ ?"

"ಬೆಳಿಗ್ಗೆ ಏಳುವ ವೇಳೆಗೆ ಮುಖದಲ್ಲಿರುವ ದೋಷಗಳೆಲ್ಲವೂ ಮಾಯ ವಾಗುವುದಂತೆ........"

"ರಾತ್ರಿ ಲೇಪಿಸಿಕೊಂಡ ಆ ಜಿಡ್ಡಿನಿಂದ, ಅಷ್ಟೇ ತಾನೇ ಆತ ಹೇಳುವುದು ?"

"ಚಿತ್ತ....ಚಿತ್ತ. ಅದಾದ ಮೇಲೆ ಉದಯವಾದಕೂಡಲೇ – ದೇವಿ ಯವರು ಹಂಸತೂಲಿಕಾತಲ್ಪದಿಂದ ಎದ್ದ ಕೂಡಲೇ – ಆ ಜಿಡ್ಡೆಲ್ಲವನ್ನೂ ಪರಿ ಹರಿಸಿಕೊಳ್ಳಬೇಕಂತೆ."

"ಹೌದು........ ಪರಿಹರಿಸಿಕೊಳ್ಳಬೇಕು ಆ ಜಿಡ್ಡನ್ನು."

"ಅದಾದಮೇಲೆ ಈ ಎರಡನೇ ಸೀಸೆಯಲ್ಲಿರುವ – ವ್ಯಾನಿಷಿಂಗ್ ಕ್ರೀಂ ಹಚ್ಚಿದಕೂಡಲೇ ಅದೃಶ್ಯವಾಗಿ, ಆಹ್ಲಾದವನ್ನುಂಟುಮಾಡುವುದಂತೆ."

"ಅದೂ ಜಿಡ್ಡುಜಿಡ್ಡಾಗಿರುವುದೇ ?"

"ಇರುವುದಿಲ್ಲವಂತೆ ಮಹಾಸ್ವಾಮಿ........ಹಚ್ಚಿದ ತಕ್ಷಣ ಅದೃಶ್ಯವಾಗಿ........"

"ಆಹ್ಲಾದಕರವಾಗಿರುವುದು, ಅಲ್ಲವೇ ?"

"ಹೌದು........ಆಮೇಲೆ ಈ ಡಬ್ಬಾದಲ್ಲಿರುವ ಪೌಡರ್ ಮುಖಕ್ಕೆ ಹಚ್ಚಿಕೊಳ್ಳುವರಂತೆ ಅಂದಗಾತಿಯರು."

"ದೇವಿ ಸುಂದರಿ........ತಪ್ಪದೆ ಹಚ್ಚಿಕೊಳ್ಳುವಳು........ಸರಿ........ ಆ ತರುವಾಯ........"

"ಇದನ್ನು ಲಿಫ್‌ಸ್ಟಿಕ್ ಅಂತ ಹೇಳುವರಂತೆ........ಏಜೆಂಟ್ ಹೇಳುತ್ತಿದ್ದಾನೆ........ಇದನ್ನು ತುಟಿಗಳಿಗೆ ಹಚ್ಚಿಕೊಂಡರೆ, ತುಟಿಗಳು ಅರಗಿನಂತೆ ಕೆಂಪಗೆ ಆಗುವುದಂತೆ."

"ಗೊತ್ತು ಗೊತ್ತು........ಈ ಮಧ್ಯೆ ಗೌವರ್ನರ್ ಹೆಂಡತಿ ಹಚ್ಚಿಕೊಳ್ಳುತ್ತಿದ್ದಾಗ ಕಂಡೆ .......ಹೌದು ಅರಗಿನಂತೆ ಕೆಂಪಾಗಿ ಇರುವ ತುಟಿಗಳು."

"ಆಮೇಲೆ ನೆಯಿಲ್ ಪಾಲಿಷ್ ಅಂತ ಹೇಳುವರಂತೆ ಇದಕ್ಕೆ........ ಇದನ್ನು ಉಗುರುಗಳಿಗೆ ಹಚ್ಚಿಕೊಂಡರೆ ತೊಂಡೆಹಣ್ಣಿನಂತೆ ಕೆಂಪಗೆ ಇರುವುದಂತೆ."

"ನಿಜ. ಇಷ್ಟು ದಿನದಿಂದ ಇವುಗಳ ಉಪಯೋಗವೇ ತಿಳಿಯದು ನಮ್ಮ ದೇವಿಗೆ........ಹುಚ್ಚು ಹುಡುಗಿ........ಅವೆಲ್ಲವೂ ಏನಂತೆ."

"ಯಾವುಯಾವುದೋ ಸೋಪುಗಳು........ರಕ್ತಸ್ರಾವವನ್ನು ನಿಲ್ಲಿಸುವ ಔಷಧಿಗಳೂ, ಸೆಂಟುಗಳೂ, ತಲೆಗೆ ಹಚ್ಚುವ ಎಣ್ಣೆಗಳು........ಎಲ್ಲಾ ಸರಕುಗಳನ್ನು ಒಂದು ಸಾರಿ ಪರೀಕ್ಷೆ ಮಾಡಬೇಕಂತೆ........"

"ಬಹಳ ಚೆನ್ನಾಗಿವೆ........"

"ಇದು ವ್ಯಾನಿಟೀ ಬ್ಯಾಗ್ ಅಂತೆ........ಸುಂದರ ಯುವತಿಯರಿಗೆ ಹಸ್ತಭೂಷಣವಂತೆ........"

"ನೋಡಲು ಸೊಗಸಾಗಿದೆ........ಮುದ್ದುಮುದ್ದಾಗಿದೆ."

"ದೇವಿಯವರು ಇದನ್ನು ಬಹಳ ಪ್ರೀತಿಸುವರೆಂದು ಹೇಳುತ್ತಿದ್ದಾನೆ ಮಹಾಸ್ವಾಮಿ ಏಜೆಂಟ್........"

"ಇನ್ನೂ ಏನು ಹೇಳುತ್ತಾನೆ........"

"ಅವಸರ ಬೇಡವೆಂದು ಹೇಳುತ್ತಿದ್ದಾನೆ, ಬುದ್ಧೀ."

"ಇನ್ನೂ ಏನಾದರೂ ತೋರಿಸುತ್ತಾನೆಯೇ?"

"ಯಾವುವೋ ಪ್ರಖ್ಯಾತ ನಟೀಮಣಿಯರ ಫೋಟೊಗಳೂ, ಅಭಿಪ್ರಾಯಗಳೂ ತೋರಿಸುವನಂತೆ........"

* * *

"ಈ ಫೋಟೋಗಳಲ್ಲಿರುವ ನಾರೀಮಣಿಯರೆಲ್ಲಾ ಇಷ್ಟು ಸೌಂದರ್ಯವನ್ನು ಪಡೆದಿರುವುದು ಈ ಕಂಪೆನಿಯವರ ದಯೆಯಿಂದಲೇ ಅಂತಲೂ, ಅವರು ಕೊಟ್ಟಿರುವ ಅಭಿಪ್ರಾಯಗಳು ಭಾವಿ ಸೌಂದರ್ಯವತಿಯರ ಅಭ್ಯುದಯಕ್ಕೆ ಸಹಕಾರಿಯಾಗುವುದೆಂದು ನಾನು ನಂಬಿರುವೆನೆಂದು ಆತನಿಗೆ ತಿಳಿಸು."

"ಹೃದಯಪೂರ್ವಕ ವಂದನೆಗಳನ್ನು ತಮಗೆ ಅರ್ಪಿಸುತ್ತಿದ್ದಾನೆ ಏಜೆಂಟು........"

"ಸಂತೋಷ."

"ತಮ್ಮ ಅಪ್ಪಣೆಯಾದರೆ ದೇವಿಯವರಿಗೆ ಕೆಲವು ಸಲಹೆಗಳನ್ನು ಕೊಡುವೆನೆನ್ನುತ್ತಾನೆ ಮಹಾಸ್ವಾಮಿ."

"ಏನವು........ಆಗಲಿ, ಬೇಗ........"

"ದೇವಿಯವರು ಪ್ರಪಂಚದಲ್ಲಿನ ಸುಂದರಿಯರೆಲ್ಲರಿಗಿಂತಲೂ ಮಿಗಿಲು ಎನ್ನಿಸಿಕೊಳ್ಳಬೇಕಾದರೆ, ಆಕೆ ಯಾವಾಗಲೂ ಈ ಕಂಪೆನಿಯ ಸರಕುಗಳನ್ನು ಅಗಲಿರಕೂಡದಂತೆ........ನಿತ್ಯವೂ ಉಪಯೋಗಿಸಬೇಕಂತೆ."

"ಊಂ."

"ಯುದ್ಧಕಾಲವಾದರೂ, ದೇವಿಯವರಿಗೆ ಬೇಕಾದಷ್ಟು ಈ ಟಾಯಿ ಲೆಟ್ ಸಾಮಗ್ರಿಗಳನ್ನು ಉದಾರವಾಗಿ ಸರಬರಾಜು ಆಗುವಂತೆ ಕಂಪೆನಿ ಯವರೊಂದಿಗೆ ಮಾತನಾಡಿ ಏರ್ಪಾಡು ಮಾಡುವೆನೆಂದು ಅರಿಕೆಮಾಡು ತ್ತಿದ್ದಾನೆ, ಮಹಾಸ್ವಾಮಿ."

"ಹೌದೋ........ಸರಿ."

"ದೇವಿಯವರು ಮಾತ್ರ ಈ ಸುಂದರವಾದ ವ್ಯಾನಿಟಿ ಬ್ಯಾಗನ್ನು ೨೪ ಗಂಟೆಗಳೂ ತಮ್ಮ ಹತ್ತಿರಲೇ ಇಟ್ಟುಕೊಂಡು, ಅದನ್ನು ಯಾವಾಗಲೂ ತುಂಬಿಸಿ ಇಟ್ಟುಕೊಂಡು, ದಿನಚರ್ಯೆಗಳಲ್ಲಿ, ಸಾಮಾಜಿಕ ಕಾರ್ಯಕ್ರಮ ಗಳಲ್ಲಿಯೂ, ಮನೆ ಮಠ, ಒಳಗೆ ಹೊರಗೆ, ಎಲ್ಲ ಜಾಗ, ಎಲ್ಲ ಸಮಯ ಗಳಲ್ಲಿ ಈ ಸೌಂದರ್ಯ ಸಾಮಗ್ರಿಗಳನ್ನು ಉಪಯೋಗಿಸುತ್ತಿರಬೇಕೆಂದು ವಿನಯಪೂರ್ವಕ ಸಲಹೆಕೊಡುತ್ತಿರುವನು, ಏಜೆಂಟ್."

"ಸರಿ, ಮತ್ತೇನು ಹೇಳುತ್ತಾನೆ........"

"ಯಾರಾದರೂ ಸುಂದರ ರಮಣಿಯರು ದೇವಿಯರನ್ನು ಕಾಣಲು ಬಂದಾಗ, ದೇವಿಯವರೇ ಯಾರನ್ನಾದರೂ ಸುಂದರಿಯರನ್ನು ನೋಡಲು ಹೋದಾಗ, ಸೌಂದರ್ಯವು ಕಡಮೆಯಾಗದಂತೆ ಆಗಾಗ್ಗೆ, ಕನಿಷ್ಟಪಕ್ಷ ಐದು ನಿಮಿಷಗಳಿಗೊಂದಾವರ್ತಿ ಈ ಸಾಧನ ಸಾಮಗ್ರಿಗಳನ್ನು ಉಪ ಯೋಗಿಸುತ್ತಿರಬೇಕೆಂದು ಎಚ್ಚರಿಕೆಯನ್ನೂ ಕೊಡುತ್ತಿದ್ದಾನೆ ಪ್ರಭೂ."

"ಊಂ."

"ಇವುಗಳೆಲ್ಲದರಲ್ಲೂ, ಈ ಪೌಡರಿನ ಗುಣವಿಶೇಷಗಳು ಬಹಳ ಮಹ ತ್ತಾದುವೆಂತಲೂ, ಎಷ್ಟೋ ಚೆಲುವುಗಾತಿಯರ ಮಾನಮರ್ಯಾದೆಗಳನ್ನು ಇದು ಅನೇಕ ಕ್ಲಿಷ್ಟಪರಿಸ್ಥಿತಿಗಳಲ್ಲಿ ಕಾಪಾಡಿದೆಯೆಂತಲೂ, ಅದನ್ನು ಬಿಟ್ಟು ಯಾವ ಸೌಂದರ್ಯವತಿಯೂ ಐದು ನಿಮಿಷಗಳಾದರೂ ಸೌಂದರ್ಯವತಿ ಯಾಗಿರಲಾರಳೆಂದೂ, ಯಾರೊಂದಿಗೆ ಮಾತನಾಡುತ್ತಿದ್ದರೂ ಸರಿ, ಏನು ಕೆಲಸಮಾಡುತ್ತಿದ್ದರೂ ಸರಿ, ಒಂದು ಸಾರಿ ಮರೆಗೆ ಹೋಗುವ ಅವಕಾಶ ವನ್ನು ಕಲ್ಪಿಸಿಕೊಂಡು ಇದನ್ನು ಸ್ವಲ್ಪ ಮುಖಕ್ಕೆ ಬಳೆದುಕೊಂಡು ಬರು ತ್ತಿರಬೇಕೆಂದು ಏಜೆಂಟು ಮತ್ತೆ ಎಚ್ಚರಿಕೆ ಕೊಡುತ್ತಿರುವನು......."

"ಎಷ್ಟು ಒಳ್ಳೆಯ ಮನುಷ್ಯ."

"ಹೀಗೆ ಅನೇಕ ವಿಧವಾದ ಸಾಮಗ್ರಿಗಳನ್ನು ಉಪಯೋಗಿಸುತ್ತಾ, ಸೌಂದರ್ಯ ವಿಷಯದಲ್ಲಿ ಜಾಗ್ರತೆಯಾಗಿ ವರ್ತಿಸುತ್ತಿದ್ದರೆ, ಈ ಕಂಪೆನಿಯವರ ಸಹಾಯದಿಂದ ನಮ್ಮ ಮಹಾರಾಣಿಯವರಿಗೆ ಶೀಘ್ರದಲ್ಲಿ ಅಂತರ್ಜಾತೀಯ ಸೌಂದರ್ಯವತಿಯರ ಸ್ಪರ್ಧೆಯಲ್ಲಿ ಮೊದಲ ಬಹುಮಾನ ಲಭಿಸಬಹುದೆಂದು ಅಭಿಪ್ರಾಯವನ್ನು ಕೊಡುತ್ತಾ, ಈ ಏಜೆಂಟು ಈ ಆರ್ಡರ್ ಫಾರಂ ಮೇಲೆ ತಮ್ಮ ಘನವಾದ ರುಜುವನ್ನು ಹಾಕಿ, ಅಡ್ವಾನ್ಸ್ ಹಣವನ್ನು ದಯಪಾಲಿಸಬೇಕೆಂದು ವಿನಯಪೂರ್ವಕವಾಗಿ ಪ್ರಾರ್ಥಿಸುತ್ತಿರುವನು........"

"ಶೇಷಯ್ಯಾ, ಬಹಳ ಒಳ್ಳೆಯವನಯ್ಯಾ, ಈ ಮನುಷ್ಯ."

"ಹೌದು, ಮಹಾಪ್ರಭೂ."

"ಆದರೆ........ದೇವಿ ಏನೋ ಹೇಳುತ್ತಿದ್ದಾಳೆ ನೋಡು,"

"ಇವೆಲ್ಲವೂ ಆಕೆಗೆ ಏನೋ ಗೊಂದಲವಾಗಿ, ಜಟಿಲವಾಗಿಯೂ ಇರುವ ಹಾಗೆ ಕಾಣುವುದೆಂದು ದೇವಿಯವರು ಹೇಳುತ್ತಿದ್ದಾರೆ........"

"ಹುಚ್ಚು ಹುಡುಗಿ."

"ಇವೆಲ್ಲವೂ ಉಪಯೋಗಿಸಬೇಕಾದ ಅವಶ್ಯಕತೆ ಆಕೆಗೇನೂ ತೋರಲಿಲ್ಲವೆಂತಲೂ, ಆಕೆಯ ಸೌಂದರ್ಯ ಇವುಗಳ ಸಹಾಯವಿಲ್ಲದೆಯೇ ಶೋಭಾಯಮಾನವಾಗಿರುವುದೆಂದು ಅವರು ಅಭಿಪ್ರಾಯಪಡುವರು."

"ಏನೂ ಅರಿಯದವಳು............ಪಾಪ, ಏಜೆಂಟ್ ನಿಂತಿದ್ದಾನೆ ನೋಡು!"

"ಮುಖಕ್ಕೆ ಜಿಡ್ಡು ಉಜ್ಜಿಕೊಂಡು, ಸಾಬೂನಿನೊಂದಿಗೆ ಅದನ್ನು ತೊಳೆದು, ಆ ತರುವಾಯ ಮತ್ತೊಂದು ಯಾವುದೋ ಲೇಪಿಸಿಕೊಂಡು, ಅದರ ಮೇಲೆ ಯಾವುದನ್ನೋ ಹಚ್ಚಿಕೊಂಡು ಆಹ್ಲಾದ, ಆನಂದಗಳನ್ನು ಪಡೆಯುವ ಆಗತ್ಯ ತಮಗಿಲ್ಲವೆಂತಲೂ, ಗೋರಂಟಿ ಸೊಪ್ಪಿನಿಂದ ಬೆರಳುಗಳನ್ನೂ, ತೋಟದಲ್ಲಿ ಬೆಳೆದ ಸಂಪಿಗೆಯ ತೈಲದೊಂದಿಗೂ, ಜಾಜಿ, ರೋಜಾ ಮೊದಲಾದ ಪುಷ್ಪಗಳಿಂದ ತಲೆಯನ್ನೂ, ಅಲಂಕರಿಸಿಕೊಳ್ಳುವ

ಚಾಕಚಕ್ಯತೆ ಆಕೆಗೆ ತಿಳಿದಿದೆಯೆಂದೂ, ಈ ಏಜೆಂಟನನ್ನು ಕೂಡಲೇ ಕಳುಹಿಸಿಬಿಡುವಂತೆ ದೇವಿಯವರು ಹೇಳುತ್ತಿದ್ದಾರೆ."

"ಹುಚ್ಚು ಹುಡುಗಿ........ಅವಳಿಗೇನು ಗೊತ್ತಿಲ್ಲ ಶೇಷಯ್ಯಾ."

"ಏನೋ ಮಹಾಸ್ವಾಮಿ........ಏಜೆಂಟನನ್ನು ಕಳುಹಿಸಿಬಿಡುವುದೇ ಒಳ್ಳೆಯದೇನೋ........"

"ಅವಳ ಹುಚ್ಚನ್ನು ನೀನು ಮರೆಮಾಚುತ್ತಿರುವೆ........ಶೇಷಯ್ಯಾ, ಹೋದ ಊಟಿ ಸೀಸನ್ನಲ್ಲಿ ಇವುಗಳೆಲ್ಲವನ್ನು ಉಪಯೋಗಿಸಲು ಬಾರದೆ ದೇವಿ ಏಟು ತಿಂದಳು........ಈ ಸಾರಿ ಹಾಗೆ ನಡೆಯಗೊಡುವೆನೇ? ಈ ಏಜೆಂಟನನ್ನು ಒಂದು ತಿಂಗಳು ಇಲ್ಲಿಯೇ ಇರುವಂತೆ ಹೇಳು. ಎಲ್ಲಾ ಖರ್ಚುಗಳನ್ನು ನಾವೇ ವಹಿಸೋಣ."

"ಚಿತ್ತ........ಪ್ರಭುಗಳ ಆಜ್ಞೆ! ಆತನಿಗೂ ಒಂದು 'ಬೆರ್ತ್' ರಿಜರ್ವ್ ಮಾಡಿಸ್ತೇನೆ, ಊಟಿಗೆ."



# ಸುಧಾರಣೆ

"ಶೇಷಯ್ಯಾ!"

"ಪ್ರಭೂ."

"ಇಂದು ನನ್ನ ಮನಸ್ಸಿನಲ್ಲಿ ಏನೋ ಹೇಳಲಾರದ ಸಂಕಟವಾಗುತ್ತಿದೆ."

"ಒಂದು ಸೋಡಾ ತರಿಸಿಕೊಡಲೇ ಪ್ರಭೂ."

"ಛೆ, ಸೋಡಾನೀರಿಗೂ ಮನಸ್ಸಿಗೂ ಸಂಬಂಧವೇನು?"

"ಹಾಗೆ ಹೇಳಬೇಡಿ........ಮನಸ್ಸಿನಲ್ಲಿನ ಸಂಕಟಗಳಿಗೆ ಕಾರಣಗಳು ಸಾಧಾರಣವಾಗಿ ಭೌತಿಕವಾದುವೇ ಆಗಿರುತ್ತವೆ."

"ಶೇಷಯ್ಯಾ, ನೋಡು."

"................"

"ಪೂರ್ವದಿಕ್ಕಿನಲ್ಲಿ ಕಾರ್ಮುಗಿಲಿನಂತೆ ಕದಲುತ್ತಿರುವುದೇನು?........ ಶತ್ರು ಸೈನ್ಯಗಳೇ?"

"ಅಲ್ಲ ಮಹಾಪ್ರಭೂ........ಕುರಿಹಿಂಡು."

"ಎಷ್ಟು ಕುರಿಗಳು........ಅವೆಲ್ಲವೂ ಕುರಿಗಳೇ?"

"ಚಿತ್ತ."

"ಮಹಾಸಮುದ್ರದ ಹಾಗಿದೆ ಆ ಹಿಂಡು!"

"ಚಿತ್ತ........ಹೌದು ಮಹಾಸ್ವಾಮಿ........ಕುರಿಜಾತಿ ಬಹಳ ಅಭಿವೃದ್ಧಿಯಾಗಿದೆ........"

"ಶೇಷಯ್ಯಾ!"

"ಪ್ರಭೂ."

"ನನಗೇನೋ ಹೆದರಿಕೆಯಾಗಿದೆಯಪ್ಪಾ........ಶತ್ರುಗಳು ಅವನ್ನು ನಮ್ಮ ಮೇಲೆ ಬೀಳಲು ಕಳುಹಿಸಿಲ್ಲವಷ್ಟೆ."

"ನಿಮಗೆ ಆ ರೀತಿಯ ಬೆದರಿಕೆ ಕನಸಿನಲ್ಲಿಯೂ ಬೇಡ.... ಅವೆಲ್ಲವೂ ನಮ್ಮ ಸಂಸ್ಥಾನದ ಕುರಿಗಳೇ!"

"ನಮ್ಮ ಸಂಸ್ಥಾನಕ್ಕೆ ಸೇರಿದವೆ?"

"ಚಿತ್ತ........ನಿಸ್ಸಂಶಯವಾಗಿ."

"ನಮ್ಮ ಸಂಸ್ಥಾನದಲ್ಲಿ ಇಷ್ಟೊಂದು ಕುರಿಗಳಿರುವುವೇ?"

"ಇವೆ ಮಹಾಸ್ವಾಮಿ........ಪ್ರಭುಗಳ ಆಳ್ವಿಕೆಯಲ್ಲಿ ಅವು ದಿನೇದಿನೇ ಅಭಿವೃದ್ಧಿ ಹೊಂದುತ್ತಿವೆ........"

"ಇಷ್ಟು ದಿನ ಹೇಳಲೇ ಇಲ್ಲವಲ್ಲಾ ನೀನು, ನಮ್ಮ ಸಂಸ್ಥಾನದಲ್ಲಿ ಇಷ್ಟು ಕುರಿಗಳಿವೆಯೆಂದು........"

"ಚಿತ್ತ....ತಮಗೆ ತಿಳಿಯದ ವಿಷಯವೇ ಎಂದು ಸುಮ್ಮನಿದ್ದೆ."

"ಶೇಷಯ್ಯಾ."

"ಪ್ರಭೂ."

"ಇನ್ನು ಮುಂದೆ ಈ ರೀತಿ ಉಪೇಕ್ಷೆಗಳು ಕೆಲಸಕ್ಕೆ ಬಾರವು ನನ್ನ ಮುಂದೆ."

"ಅಪ್ಪಣೆ........ಪ್ರಭುಗಳು ಏನು ಹೇಳಿದರೆ ಅದನ್ನು ಮಾಡುತ್ತೇನೆ."

"ನಾನು ಹೇಳಿದ ಮೇಲೆ ಮಾಡುವುದೇ?"

"ತಪ್ಪಾಯಿತು. ಕಪಾಳಕ್ಕೆ ಹಾಕಿಕೊಳ್ಳುತ್ತಿದ್ದೇನೆ........ಇನ್ನು ಮುಂದೆ ತಾವು ಹೇಳುವ ಮುನ್ನವೇ ತಮ್ಮ ಅಂತರಂಗವನ್ನು ಗ್ರಹಿಸಿ ಪ್ರವರ್ತಿಸುತ್ತಿರುತ್ತೇನೆ ಮಹಾಪ್ರಭೂ.

"ರೈಟ್."

"ಮಹಾಪ್ರಸಾದ."

"ಎಷ್ಟು ಕುರಿಗಳು.......ಎಷ್ಟು ಕುರಿಗಳು! ವಿಧವಿಧವಾದ ಕುರಿಗಳು, ಬಣ್ಣಬಣ್ಣದ ಕುರಿಗಳು, ಪುಟ್ಟಪುಟಾಣಿ ಕುರಿಗಳು, ದೊಡ್ಡದೊಡ್ಡ ಕುರಿಗಳು....ಇಷ್ಟು ಇದ್ದರೂ ಈವರೆವಿಗೂ ನನಗೆ ತಿಳಿದಿರಲೇ ಇಲ್ಲ......."

"ತಪ್ಪುಕೆಲಸ ಮಾಡಿದೆ ಮಹಾಸ್ವಾಮಿ."

"ನೋಡಲು ಆನಂದವಾಗುತ್ತಲ್ಲವೇ ಈ ಕುರಿಗಳು?"

"ಹೌದು ಮಹಾಸ್ವಾಮಿ.......ನೋಡಲು ಸಂತೋಷವಾಗಿದೆ."

"ನೋಡು, ಆ ಹಿಂಡು ಊರು ಸಮೀಪಿಸುತ್ತಿರುವಂತೆ ಕಾಣಿಸುತ್ತಿದೆ."

"ಹೌದು ಪ್ರಭೂ."

"ಎಷ್ಟು ರಮ್ಯವಾದ ನೋಟ. ತರತರವಾದ ಜಂತುಗಳು, ಕುಣಿಯುತ್ತಿರುವ ನಡೆ; ಒಂದಾದರೂ ಗುಂಪಿನಿಂದ ತಪ್ಪಿಸಿಕೊಂಡು ಹೋಗುತ್ತಿಲ್ಲ ನೋಡಿದೆಯಾ?"

"ಚಿತ್ತ....ಅದರ ಸ್ವಭಾವವೇ ಅಷ್ಟು ಮಹಾಸ್ವಾಮಿ."

"ನಮ್ಮ ಮನುಷ್ಯರಿಗಿಂತಲೂ ಬಹಳ ಬುದ್ಧಿಶಾಲಿಗಳ ಹಾಗೆ ಕಾಣಿಸುತ್ತವೆ. ನಮ್ಮ ಮೂಢರನ್ನು ಆ ರೀತಿ ಸಾಲುಸಾಲಾಗಿ ನಡೆಯುವಂತೆ ಹೇಳಿದರೆ, ಒಬ್ಬನು ಕುಂಟುತ್ತಲೋ, ಒಬ್ಬನು ಕಾಲು ಎಳೆಯುತ್ತಲೋ, ಇಲ್ಲ ಒಬ್ಬನು ಸಂದಿಗಳಲ್ಲಿ ಜಾರಿಕೊಳ್ಳುತ್ತಲೋ........ಥತ್."

"ಹೌದು ಮಹಾಸ್ವಾಮಿ.."

"ಕುರಿಗೆ ಇರುವಷ್ಟು ಬುದ್ಧಿಯಾದರೂ ಇವರಿಗೆ ಇಲ್ಲದಿದ್ದರೆ......."

"ಹೌದು.......ಅಷ್ಟೆ."

"ಅವನ್ನು ನೋಡು, ಎಷ್ಟು ಸ್ವೇಚ್ಛೆಯಾಗಿ, ಎಷ್ಟು ಉತ್ಸಾಹವಾಗಿ, ಎಷ್ಟು ಹಾಯಾಗಿ ಹಿಂಡಿನಲ್ಲಿ ನಡೆಯುತ್ತಿರುವುದೋ."

"ಅವುಗಳೂ ಅಷ್ಟೇ ಸ್ವಾಮಿ...........ಮನುಷ್ಯರಂತೆ ಯದ್ವಾತದ್ವಾ ಮಾಡೋಲ್ಲ."

"ಶೇಷಯ್ಯಾ."

"ಬುದ್ಧೀ."

"ಈ ಕುರಿಗಳನ್ನು ನೋಡುತ್ತಿದ್ದರೆ, ಅಪಕ್ಕೆ ಏನಾದರೂ ಮಾಡಬೇಕೆಂದು ಬುದ್ಧಿ ಬರುತ್ತದೆ."

"ಚಿತ್ತ. ಏನು ಮಾಡೋಣ ಮಹಾಸ್ವಾಮಿ."

"ನೋಡು, ಆ ಹಿಂಡನ್ನು ಓಡಿಸಿಕೊಂಡು ಬರುವಾತನೊಂದಿಗೆ ಅವನ್ನು ನಮ್ಮ ಕೋಟೆಯೊಳಗೆ ಓಡಿಸುವಂತೆ ಹೇಳು."

"ಹೇಳ್ತೇನೆ ಮಹಾದೊರೆ........ಹೇಳಿದ ಮೇಲೆ........"

"ಆ ಮರಿಗಳನ್ನೆಲ್ಲಾ ನಾವೇ ಚೆನ್ನಾಗಿ ಸಾಕೋಣ........ಇಷ್ಟು ಒಳ್ಳೆಯ ಜಂತುಗಳನ್ನು........"

"ಬಹಳ ಚೆನ್ನಾಗಿದೆ ಮಹಾಸ್ವಾಮಿ."

"ಅಲ್ಲ, ಶೇಷಯ್ಯಾ! ನಮ್ಮ ಆಸ್ಥಾನದಲ್ಲಿ ಬೆಳೆಯುತ್ತಿರುವ ಕವಿಗಳಿಗಿಂತಲೂ, ಪಂಡಿತರಿಗಿಂತಲೂ ಕೇವಲವೇ ಈ ಕುರಿ–ಮರಿಗಳು!"



# ೨೪ ಗಂಟೆಗಳು

"ಶೇಷಯ್ಯಾ!"

"ಪ್ರಭೂ, ನಮಸ್ತೆ."

"ಈ ದಿನ ತಾರೀಖು ಎಷ್ಟು?"

"ಮೂವತ್ತೊಂದು, ಮಹಾಸ್ವಾಮಿ."

"ಹಾಗೋ, ಮೊದಲನೇ ತಾರೀಖು ನಾಳೆ ಎಂದಾಯಿತು."

"..............."

"ಹಾಗೇನು ಅನುಮಾನಪಡುತ್ತಿರುವಿರಿ?"

"ಮೊದಲನೇ ತಾರೀಖು ನಾಳೆ ಅಲ್ಲವೇನೋ ಎಂದು ಯೋಚಿಸುತ್ತಿದ್ದೇನೆ."

"ನಾಳೆಯೇ ಮಹಾಸ್ವಾಮಿ. ತಮ್ಮೊಂದಿಗೆ ಸುಳ್ಳಾಡಬೇಕೆ........?"

"ಶೇಷಯ್ಯಾ, ಮೊದಲನೇ ತಾರೀಖು ನಾಳೆ ಅಲ್ಲ, ನಾಳಿದ್ದು."

"ಮಹಾಪ್ರಭೂ, ತಮ್ಮದು ತಪ್ಪು ಗ್ರಹಿಕೆ."

"ಇಲ್ಲ, ಇಲ್ಲ. ಮೊದಲನೇ ತಾರೀಖು ನಾಳಿದ್ದೇ. ನಾಳೆ ಮುವತ್ತೊಂದು, ಇಂದು ಮುವತ್ತು, ನಿನ್ನೆ ಇಪ್ಪತ್ತೊಂಬತ್ತು."

"ಪ್ರಭುಗಳದು ತಪ್ಪು ಗ್ರಹಿಕೆಯೆಂದು ಈ ಮೊದಲೇ ಮನವಿಮಾಡಿಕೊಂಡಿದ್ದೇನೆ. ಈಗ ನಿಮ್ಮ ಮಾತಿನಿಂದ ಅದು ದೃಢವಾಯಿತಲ್ಲದೆ, ನನ್ನನ್ನು ಬೆದರಿಸಿ ಕೊಲ್ಲುತ್ತಿರುವಿರಿ!"

"ಇಲ್ಲ, ಇಲ್ಲ. ಶೇಷಯ್ಯಾ! ಏನೂ ತಪ್ಪು ತಿಳಿದಿಲ್ಲ. ನನ್ನ ಉದ್ದೇಶವನ್ನು ನೀನಿನ್ನೂ ಗ್ರಹಿಸಿಲ್ಲ, ಅರ್ಥಮಾಡಿಕೊಂಡಿಲ್ಲ."

"ನನ್ನ ಶ್ರಾದ್ಧ! ನೋಡಿಕೊಳ್ಳಿ ಬೇಕಾದರೆ ಆ ಕ್ಯಾಲೆಂಡರ್."

"ಹಾಳು ಕ್ಯಾಲೆಂಡರ್........ಅದಕ್ಕೆ ನಾವು ಸೇವಕರಾಗಕೂಡದು."

''ಹಾಗಾದರಿಂದು ಮುವ್ವತ್ತೊಂದು ಅಲ್ಲವೇ ? ನಾಳೆ ಮೊದಲನೇ ತಾರೀಖು ಅಲ್ಲವೆನ್ನುವಿರಾ ? ನಿನ್ನೆ ಮುವ್ವತ್ತು ಅಲ್ಲವೇನು ?''

''ಅಲ್ಲ, ಅಲ್ಲ. ನಾವು ಈ ಪದ್ಧತಿಯೆಲ್ಲಾ ಬದಲಾಯಿಸುತ್ತಿರುವೆವು.''

''...............''

''ಇನ್ನೂ ನನ್ನ ಉದ್ದೇಶ ಗ್ರಹಿಸಲಿಲ್ಲವೇ ?''

''ನನ್ನ ತಲೆ........ನನ್ನನ್ನು ಹಿಸುಕಿ ಸಾಯಿಸುತ್ತಿರುವಿರಿ.''

''ಕೇಳು ಶೇಷಯ್ಯಾ ! ಇಂದಿನಿಂದ ನಮ್ಮ ಸಂಸ್ಥಾನದ ಗಡಿಯಾರಗಳೆಲ್ಲಾ ೨೪ ಗಂಟೆ ಹಿಂದಕ್ಕೆ ನಡೆಯುವುದು.''

''...............''

''ಹಾಗೇನೂ ನೋಡಬೇಡ........ತಿಳಿಯಿತೇ ?''

''ಅಯ್ಯೋ, ರಾಮ.''

''ಕೇಳು, ಕೇಳು. ನಮಗಿಷ್ಟು ಮಾತ್ರ ಅಧಿಕಾರವಿಲ್ಲವೇ ?''

''ಎಲ್ಲರೂ ಬೇಕೆಂದು ಒಂದು ಗಂಟೆ ಮುಂದಕ್ಕೆ ಗಡಿಯಾರಗಳನ್ನು ನಡೆಸಿದರೆ ನಾವು ಹೀಗೆ........''

''ಅವರವರ ಸೌಕರ್ಯ ಅವರದು. ನಮ್ಮ ಸಂಸ್ಥಾನದಲ್ಲಿ ಇಂದಿನಿಂದ ಕಾಲ ಇಪ್ಪತ್ತಾ್ನಲ್ಕು ಗಂಟೆ ಹಿಂದಕ್ಕೆ ಹೋಗುತ್ತದೆ.''

''ಎಲ್ಲರೂ ಮುಂದಕ್ಕೆ ಹೋಗುತ್ತಿದ್ದರೆ ನಾವು ಹಿಂದಕ್ಕೆ........''

''ಹಾಗೇನೂ ಅಪಾರ್ಥ ಮಾಡಬೇಡ ! ಇಂದು ಮುವ್ವತ್ತನೇ ತಾರೀಕೆಂದು ನಮ್ಮ ಸಂಸ್ಥಾನದಲ್ಲೆಲ್ಲಾ ಡಂಗುರ ಹೊಡಿಸು.''

''ಅಪ್ರತಿಷ್ಠೆ ಕೆಲಸ.''

''ಮೂಗಿನ ಮೇಲಿರಿಸಿರುವ ಬೆರಳು ತೆಗೆ. ಅನಂತವಾದ ಕಾಲವನ್ನು ಒಂದು ಕಾಗದದ ಚೂರಿನ ಮೇಲೆ, ಒಂದು ಲೇಖನಿಯ ಸಹಾಯದಿಂದ ಹಿಂದಕ್ಕೆ ನಡಿಸಬೇಕಾಗಿರುವ ಸಮಯದಲ್ಲಿ ನಿನ್ನ ಕೈ ಆ ಅಪ್ರಯೋಜಕ ಮೂಗಿನ ಮೇಲೆ........''

''ಪ್ರಭೂ, ಈ ಅಪ್ರತಿಷ್ಠೆಗೆ ಅಸ್ತಿಭಾರ ನನ್ನ ಕೈಯಿಂದ ಬೇಡ........ ಇದೋ ನನ್ನ ರಾಜೀನಾಮೆ ಪತ್ರ.''

"ಹುಚ್ಚು ಶೇಷಯ್ಯಾ........ಅಷ್ಟು ಮುಂದಾಲೋಚನೆಯಿಲ್ಲವೆ ನಿನ್ನ ತಲೆಯಲ್ಲಿ?"

"ಏನು ಆಲೋಚನೆ ಮಾಡಲಿ ಹೇಳಿ........ನನ್ನ ಕರ್ಮ."

"ಶೇಷಯ್ಯಾ, ನಮ್ಮ ಸಂಸ್ಥಾನದಲ್ಲಿ ನಮ್ಮ ಇಷ್ಟ. ನಮ್ಮ ರಾಜ್ಯ ........ನಮಗೆ ಹೇಗೆ ಸೌಕರ್ಯವಾಗಿರುತ್ತೋ ಹಾಗೆ ಕಾಲವನ್ನು ಬದಲಾಯಿಸುತ್ತೇವೆ. ಇಂದು ತಾರೀಖು ಮುವ್ವತ್ತು! ಮತ್ತೆ ಮಾತಾಡಿದರೆ ಇಪ್ಪತ್ತೊಂಬತ್ತು ಅಂತೇನೆ."

"ಪ್ರಭುಗಳ ಶ್ರೇಯಸ್ಸನ್ನು ಕೋರಿ ನನ್ನ ಕೊನೆಯ ಸಲಹೆ. ಈ ರೀತಿ ಚೇಷ್ಟೆಗಳನ್ನು ನೋಡಿ ಎಲ್ಲರೂ ನಗುತ್ತಾರೆ."

"ನಕ್ಕವರ ಮೂಗು ಮುರಿಯೋಣ, ತಲೆ ಹಾರಿಸೋಣ. ನನ್ನ ಸಂಸ್ಥಾನ, ನನ್ನ ಅಧಿಕಾರ........ನನ್ನ........"

"ನಿಮ್ಮ ಸಂಸ್ಥಾನಕ್ಕೆ ಇನ್ನು ಮುಂದೆ ಮಂತ್ರಿಗಳೂ ಸಹಾ ನೀವೇ! ಇದೋ ನನ್ನ ರಾಜೀನಾಮೆ ಪತ್ರ ಮತ್ತೆ ಅಪ್ಪಣೆ ದಯಪಾಲಿಸಿ."

"ಶೇಷಯ್ಯಾ! ಮೂರ್ಖಾ, ತೊಂದರೆ ಬೀಳಬೇಡ. ಇಷ್ಟೆಲ್ಲಾ ನಾನು ಏಕೆ ಬದಲಾವಣೆ ಮಾಡುತ್ತಿರುವೆನೋ ಯೋಚಿಸಿರುವೆಯಾ?"

"ಹುಚ್ಚಾಸ್ಪತ್ರೆಗಳನ್ನು ತುಂಬಿಸಲು! ಅಲ್ಲದೆ ನನಗೂ ನಿಮ್ಮ ಪಕ್ಕದಲ್ಲಿ ಒಂದು ಮಂಚವನ್ನು ಹಾಕಿಸಲು."

"ಥತ್! ಸ್ಟುಪಿಡ್ ಫೆಲೋ! ಎಲ್ಲಿ ಹಾಳಾಯಿತಯ್ಯಾ ನಿನ್ನ ಸೂಕ್ಷ್ಮ ಬುದ್ಧಿ! ಹೇಳ್ತಿದ್ದೇನೆ ಕೇಳು. ಈ ದಿನ ಮುವ್ವತ್ತನೇ ತಾರೀಖು, ನಾಳೆ ಮುವ್ವತ್ತೊಂದು, ನಾಳಿದ್ದು........"

"ಅಯ್ಯೋ ದೇವರೇ! ಎಷ್ಟು ಕೆಟ್ಟುಹೋಗಿದೆ ನಿಮ್ಮ ಮೆದುಳು."

"ಶೇಷಯ್ಯಾ, ನಿಲ್ಲಿಸು ನಿನ್ನ ಪ್ರಲಾಪ. ನೀನು ನಾಳೆ ಮೊದಲನೇ ತಾರೀಖು ಅಂತ ಅಂದುಕೊಂಡಿರಬಹುದು."

"ನನ್ನ ಕರ್ಮ ಸ್ವಾಮಿ! ನನ್ನ ಪ್ರಾರಬ್ಧ. ನಾನು ಅಂದುಕೊಳ್ಳುವುದೇನು – ಕ್ಯಾಲೆಂಡರುಗಳೆಲ್ಲವೂ ಘಂಟಾಘೋಷವಾಗಿ ತೋರಿಸುತ್ತಿವೆ."

''ಹಾಳು ಕ್ಯಾಲೆಂಡರುಗಳ ವಿಷಯ ನಮಗೆ ಏಕೆ? ಅವು ನಮ್ಮ ಸೌಕರ್ಯಗಳನ್ನು ನೋಡುವುದಿಲ್ಲ.''

''ಈಗ ನಮಗೆ ಬಂದಿರುವ ಅಸೌಕರ್ಯವಾದರೂ ಏನು ಮಹಾಸ್ವಾಮಿ?''

''ಊಂ, ಹಾಗೆ ದಾರಿಗೆ ಬಾ. ನಾಳೆ ಮೊದಲನೇ ತಾರೀಖು ಆದರೆ ನಮಗೆಷ್ಟು ಪ್ರಮಾದವೋ ನಿನಗೆ ತಿಳಿದಿರುವುದೇ?''

''ನನಗೇನೂ ಅಂತಹ ಪ್ರಮಾದವ್ಯಾವುದೂ ಕಾಣಿಸುತ್ತಿಲ್ಲ.''

''ಮಹಾ ಪ್ರಚಂಡ ಬುದ್ಧೀ ನೋಡು ನಿನ್ನದು! ಇಷ್ಟೇಯೇನು ನಿನ್ನ ತಿಳುವಳಿಕೆ.''

''ನನಗೇನೂ ಅರ್ಥವಾಗುತ್ತಿಲ್ಲ ಮಹಾಸ್ವಾಮಿ.''

''ಮೊದಲು ಹೋಗಿ ಡಂಗುರ ಹೊಡಿಸು – ನಮ್ಮ ಹೊಸ ಪದ್ಧತಿ ಪ್ರಕಾರ ಮೊದಲನೇ ತಾರೀಖು ನಾಳಿದ್ದೆಂದು.''

''ನೀವು ನನ್ನನ್ನು ಸಾಯಿಸಿ, ಸುಡಿಸಿ........ಕೊನೆಯದಾಗಿ ಒಂದು ಮನವಿ ಮಾಡಿಕೊಳ್ಳುತ್ತೇನೆ. ಮೊದಲನೇ ತಾರೀಖು ಶಾಸ್ತ್ರೀಯವಾಗಿ ನಾಳೆ........ಅದರಿಂದ ನಮಗುಂಟಾಗುವ ನಷ್ಟವಾದರೂ ಏನೆಂಬುದನ್ನು ಸ್ವಲ್ಪ........''

''ಇನ್ನೂ ಮೆತ್ತಗೆ ಕೇಳ್ತೀಯಾ? ಖಜಾನೆ ಖಾಲಿಯೆಂದು ಕೋಶಾಧಿಕಾರಿ ಬಂದು ಹೇಳಿದ್ದಾನೆ........ಇನ್ನೊಂದು ಇಪ್ಪತ್ನಾಲ್ಕು ಗಂಟೆಗಳಲ್ಲಿ ಹಣ ಬರುವ ಸೂಚನೆಗಳ್ಯಾವುವೂ ಕಾಣಿಸುತ್ತಿಲ್ಲ........ಹುಚ್ಚಾ! ನಾಳೆ ಮೊದಲನೇ ತಾರೀಖು ಆದರೆ, ನಾವೆಲ್ಲರಿಗೂ ಸಂಬಳ ಸಾರಿಗೆಗಳನ್ನು ಕೊಡುವುದಾದರೂ ಹೇಗೆ?''

''...............''



# ಪ್ರಭುಗಳ ದಿವ್ಯಚಿತ್ತ

"ಶೇಷಯ್ಯಾ!"

"ಪ್ರಭೂ."

"ಹೊತ್ತೇ ಹೋಗುತ್ತಿಲ್ಲ ಈ ಮಧ್ಯೆ........"

"ಚಿತ್ತ....ಒಂದೊಂದು ವೇಳೆ ಹಾಗೇ ಇರುತ್ತೆ, ಮಹಾಸ್ವಾಮಿ."

"ಹೇಗೆ ಮತ್ತೆ ?"

"ಹಾಗೇ ಡಿಲ್ಲಿ ಕಡೆಯೋ, ಬೊಂಬಾಯಿ ಕಡೆಯೋ ತಿರುಗಿ ಕೊಂಡು........"

"ಬೇಡ, ಬೇಡ ಶೇಷಯ್ಯಾ........ಸುಸ್ತಾಗಿದೇನೆ, ಅಂಥಹ ಮರೀ ಚಿಕೆಗಳನ್ನು ನೋಡಿ, ನೋಡಿ........"

"ಹೋಗಲಿ ಬಿಡಿ........ಆಲ್ಮೋರಾ ಕಡೆ ಹೋಗಿ ಇಬ್ಬರು ಮೂವರು ನರ್ಸುಗಳನ್ನು ಗೊತ್ತುಮಾಡಿಕೊಂಡು........"

"ಶೇಷಯ್ಯಾ........ಆ ಚಿಕಿತ್ಸೆ ಈವರೆವಿಗೇ ಅನೇಕ ಸಾರಿ ಪ್ರಯತ್ನ ಮಾಡಿದೆ........ಲಾಭವಾಗಲಿಲ್ಲ. ಆಲ್ಮೋರಾವಿಗೇ ಹೋಗಬೇಕೆಂದಿಲ್ಲ. ನರ್ಸುಗಳನ್ನು ಬರಹೇಳಿದರೆ ಇಲ್ಲಿಗೇ ಬರ್ತ್ತಾರೆ........ಅವರ ಹಸ್ತಗುಣಕ್ಕೆ ವಾಸಿಯಾಗುವ ಪರಿಸ್ಥಿತಿಯಲ್ಲ ನಮ್ಮದು........"

"ಇಲ್ಲ, ಭದ್ರಾಚಲದ ಅಡವಿಗಳಲ್ಲಿ ಹುಲಿ ಬೇಟೆಗಾದರೂ........"

"ಹುಷ್, ಬೇಡ. ಅವೆಲ್ಲವೂ ಕೋರೆಹಲ್ಲುಗಳು ಕಿತ್ತ ಹುಲಿಗಳು. ನಿಜ ವಾದ ಹುಲಿಗಳು, ಭಾರಿ ಹುಲಿಗಳು ಪ್ರಪಂಚದಲ್ಲೆಲ್ಲೂ ಇಲ್ಲದಿರುವಾಗ....

ಈಗಿನ ಕಾಲದ ಹುಲಿಗಳನ್ನು ಸಾಯಿಸುವ ಅವಶ್ಯಕತೆಯೇನಿಲ್ಲ........ಅವು ನಮಗೆ ತೊಂದರೆ ಕೊಡಲಾರವು........"

"ಹಾಗಾದರೆ ಏನು ಮಾಡೋಣ ಬುದ್ಧೀ?"

"ಅದನ್ನೇ ನಾನೂ ಆಗಲಿಂದ ಯೋಚಿಸುತ್ತಿದ್ದೇನೆ."

"ನಿಮ್ಮ ಪರಿಸ್ಥಿತಿಗೆ ಸ್ವಲ್ಪ ಏರ್ಪಾಡು ಬೇಕಾಗಿದೆ........ನೀವು ಆಯಾಸಪಟ್ಟಿರುವಿರಿ."

"ಹೌದು ಆಯಾಸಪಟ್ಟಿದ್ದೇನೆ........ನೋಡಲಾರೆ ಈ ಪ್ರಪಂಚವನ್ನು, ಮನುಷ್ಯರನ್ನು, ದೊರೆಗಳನ್ನು, ಹುಲಿಗಳನ್ನು, ಸರ್ಪಗಳನ್ನು .."

"ಹಾಗಿದ್ದಲ್ಲಿ ಮನಸ್ಸನ್ನು ಮತ್ತಷ್ಟು ಜಾಗ್ರತೆಯಾಗಿಟ್ಟುಕೊಳ್ಳಬೇಕು ........ಉದ್ರೇಕ ನಿಮ್ಮ ಶರೀರಕ್ಕೆ ಸರಿಯಲ್ಲ ......."

"ಶೇಷಯ್ಯಾ!"

"ಮಹಾಪ್ರಭೂ."

"ಇಪ್ಪತ್ನಾಲ್ಕು ಗಂಟೆಗಳಲ್ಲಿ........"

"ಸತ್ತೆ........ಯಾವುದೋ ಉಪದ್ರವಕ್ಕೆ ತಲೆಹಾಕುತ್ತಿರುವಿರಿ."

"ಕೇಳು ಶೇಷಯ್ಯಾ."

"ಇಪ್ಪತ್ನಾಲ್ಕು ಗಂಟೆಗಳಲ್ಲಿ........"

"ಏನು ನಡೆಯುತ್ತದೆ ಸ್ವಾಮಿ ಇಪ್ಪತ್ನಾಲ್ಕು ಗಂಟೆಗಳಲ್ಲಿ."

"ಆ ಗಡಿಯಾರದ ಮುಳ್ಳು ಈಗಿರುವ ಜಾಗದಿಂದ ಎರಡು ಸಾರಿ ಸುತ್ತಿ ಮತ್ತೆ ಅದೇ ಸ್ಥಳಕ್ಕೆ ಬರುವುದು."

"ಅದು ತೀರಾ ಸತ್ಯವಾದ ಮಾತು."

"ಶೇಷಯ್ಯಾ!"

"ಪ್ರಭೂ."

"ಇಪ್ಪತ್ನಾಲ್ಕು ಗಂಟೆಗಳಲ್ಲಿ ಆ ಗಡಿಯಾರದ ಮುಳ್ಳು ಎರಡು ಸಾರಿ ಪ್ರದಕ್ಷಿಣೆ ಹಾಕಿ ಅಲ್ಲಿಗೇ ಬರಲು ಸಾಧ್ಯವಿಲ್ಲ."

"ಸಾಧ್ಯವಿದೆ ಸ್ವಾಮಿ."

"ಸಾಧ್ಯವಿಲ್ಲಾಂತ ಹೇಳ್ತಿದ್ದೇನೆ........ನಮ್ಮ ಸಂಸ್ಥಾನದಲ್ಲಿ ಈ ರೀತಿ ಆಟಗಳು ನಡೆಯಲು ಅವಕಾಶವಿಲ್ಲ........"

"ಪ್ರಭೂ."

"ಇಲ್ಲಾ....ಎಷ್ಟು ಮಾತ್ರಕ್ಕೂ ಆಗದು. ಇದ್ದರೆ ಇರುವ ಜಾಗದಲ್ಲೇ ಇರಲಿ. ಇಲ್ಲದಿದ್ದರೆ ಹೋಗಲಿ. ಅಷ್ಟೇ ಹೊರತು ಹೊರಟ ಸ್ಥಾನಕ್ಕೆ ಮತ್ತೆ ಬರುವ ಮಾತಾಗಿದ್ದರೆ, ಶೇಷಯ್ಯಾ, ಅದರ ಕತ್ತು ಹಿಸುಕಿ ಹಾಕಿ ಬಿಡು."



# "ವೇದಮೂರ್ತಿ"

"ನನ್ನ ಬಾಯಿಂದ ಮಾತು ಬರುವುದೇ ತಡ 'ಚಿತ್ತ, ಚಿತ್ತ' ಎಂದು ವಿನಯ ನಟಿಸುವ ಮನುಷ್ಯರನ್ನು ಕಂಡರೆ ನನಗೆ ಬಹಳ ಅಸಹ್ಯವಾಗುತ್ತದೆ, ಶೇಷಯ್ಯಾ."

"ಚಿತ್ತ........ತಮಗೆ ಅಸಹ್ಯವೇ ಆಗುತ್ತೆ."

"ನಾನು ಹೇಳುವುದನ್ನು ಸ್ವಲ್ಪವಾದರೂ ಕೇಳಿ ಅದರಲ್ಲಿ ಸಬೂಬೂ, ಸಂದರ್ಭವೂ ಇರುವುದೋ ಇಲ್ಲವೋ ಗಮನಿಸಿ 'ಚಿತ್ತ' ಅಂತ ಹೇಳಬೇಕೇ ಹೊರತು........"

"ಚಿತ್ತ........ಅಷ್ಟೇ ಮಹಾಸ್ವಾಮಿ."

"ನಾನು ಹೇಳುವುದು ಪ್ರತಿಯೊಂದೂ ವೇದವಾಕ್ಯವೆಂದೂ, ಅದಕ್ಕೆ ವ್ಯತಿರಿಕ್ತವಿಲ್ಲವೆಂದೂ, ಅವು ನನ್ನ ಬಾಯಿಂದ ಬರುವ ಮೊದಲೇ 'ಚಿತ್ತ' ಎಂದು ಹೇಳಲು ತವಕಪಡುವ ಮನುಷ್ಯರನ್ನು ಕಂಡರೆ ಎಳ್ಳಷ್ಟೂ ನನಗೆ ಗೌರವವಿಲ್ಲ........"

"ಚಿತ್ತ........ಹೇಗಿರುವುದು ಪ್ರಭೂ."

"ನೋಡು ಶೇಷಯ್ಯಾ, ನಾನು ದೊಡ್ಡಮನುಷ್ಯನೇ ಇರಬಹುದು. ಅನೇಕ ಮಂದಿ ನನಗೆ ಸೇವಕರೇ ಆಗಬಹುದು, ಅನೇಕ ಮಂದಿ ನಾನು ಹೇಳಿದ ರೀತಿಯಲ್ಲಿ ನಡೆಯುವುದೇ ತಮ್ಮ ವಿಧಿಯೆಂದು ಭಾವಿಸಿಕೊಳ್ಳಬಹುದು, ಆದರೆ ನಾನು ಹೇಳಿದಕ್ಕೆಲ್ಲಾ ವ್ಯತಿರಿಕ್ತವಿಲ್ಲವೆಂದು ತಿಳಿದುಕೊಳುವುದು........"

"ಚಿತ್ತ."

"ನಾನು ಹೇಳಿದಕ್ಕೆಲ್ಲಾ ವ್ಯತಿರಿಕ್ತವಿಲ್ಲವೆಂದು ತಿಳಿದುಕೊಳ್ಳುವುದು........"

"ಚಿತ್........ಥತ್........"

"ವ್ಯತಿರಿಕ್ತವಿಲ್ಲವೆಂದುಕೊಳ್ಳುವುದು ಏನೂಂತ ತಿಳಿದುಕೊಂಡೆ."

"ಚಿತ್ತ .......ಏನೂ ಅಂತ ತಿಳಿದುಕೊಂಡೆ ಸ್ವಾಮಿ."

"ಪರಮ ಮೂರ್ಖತೆ."

"ಚಿತ್ತ! ಪರಮ ಮೂರ್ಖತೆ ಸ್ವಾಮಿ, ಅಲ್ಲವೆನ್ನುವೆನೆ?"

"ನಾನು ಸಾಧಾರಣವಾಗಿ ತಿಳುವಳಿಕೆಯಿಂದಲೇ ಮಾತನಾಡಿದೆನೆಂದುಕೊ, ಆದರೆ ನಾನು ಯಾವ ಕಾರಣದಿಂದಲಾದರೂ ಹಸುವಿಗೆ ಮೂರು ಕಾಲುಗಳೆಂದರೆ........"

"ಚಿತ್ತ ... ನೀವು ಹೇಳಿದಂತಹ ಹಸುಗಳಿಲ್ಲದೆ ಇಲ್ಲ ಮಹಾಸ್ವಾಮಿ."

"ಇರುವುವೇ? ಶೇಷಯ್ಯಾ, ಪ್ರಪಂಚದಲ್ಲಿ ಅಂತಹ ಹಸುಗಳಿರುವುವೇ? ಇದ್ದರೆ ಇಷ್ಟು ದಿನಗಳಿಂದ ಏಕಯ್ಯಾ ಹೇಳಲಿಲ್ಲ?"

"ಚಿತ್ತ........ತಮಗೆ ಅಷ್ಟು ತಿಳಿಯದೇ ಎಂದು ಸನ್ನಿಧಾನದಲ್ಲಿ ಅರಿಕೆ ಮಾಡಲು ಸಾಹಸವಾಗಲಿಲ್ಲ."

"ಓಹೋ, ಹಾಗೋ? ಸರಿ. ನೋಡು ಶೇಷಯ್ಯಾ, ಇನ್ನು ಮುಂದೆ ಇಂತಹ ವಿಚಿತ್ರಗಳಾವುದಾದರೂ ಇದ್ದರೆ ನನ್ನೊಂದಿಗೆ ಹೇಳುವುದನ್ನು ಮರೆಯಬೇಡ........ನೀನು ಆ ಹಸುವನ್ನು ನೋಡಿದೆಯಾ?"

"ಚಿತ್ತ....ನಾಲ್ಕನೇ ಕಾಲು ಮುರಿದುಹೋಗಿ ಮೂರೇ ಕಾಲುಗಳು ಇರುವ ಹಸುಗಳನ್ನು ಬಹಳ ನೋಡಿದ್ದೇನೆ."

"ಈ ಸಾರಿ ಆ ರೀತಿಯ ಹಸು ಕಾಣಿಸಿದರೆ ಎಷ್ಟು ಖರೀದಿಯಾದರೂ ತೆತ್ತು ಕೊಂಡುಕೊಂಡು ಬಾ, ತಿಳಿಯಿತೇ?"

"ಚಿತ್ತ....ತಪ್ಪದೆ. ಪ್ರಭುಗಳ ಆಜ್ಞೆಯನ್ನು ಮೀರಬಲ್ಲನೇ?"

"ಹಾಗಾದರೆ ಶೇಷಯ್ಯಾ! ನಿಜವಾಗಿ ಅಂತಹ ಹಸು, ಮೂರು ಕಾಲಿರುವ ಹಸು ವಿಚಿತ್ರವಲ್ಲವೇ?"

"ಚಿತ್ತ........ಅಲ್ಲವೆಂದು ಹೇಳಲು ಯಾರಿಗೆ ಸಾಹಸವಿದೆ ನಿಮ್ಮ ಮುಂದೆ."

"ರೈಟ್. ಅಂತಹ ವಿಚಿತ್ರ ಹಸುವನ್ನು ನಾವು ಕೊಂಡು ತರುವುದು ಅವಶ್ಯಕವಲ್ಲವೇ?"

"ಚಿತ್ತ.... ...ಮುಮ್ಮಾತಿಗೂ ಅವಶ್ಯಕ."

"ಹಾಗಾದರೆ ನೋಡು ಶೇಷಯ್ಯಾ, ನಿನಗೇನು ಮತಿಹೋಯಿತೇ?"

"ಚಿತ್ತ....ಆಳುವ ಮಹಾಸ್ವಾಮಿಯವರು ಅಭಿಪ್ರಾಯಪಟ್ಟರೆ........"

"ಶುದ್ಧ ತಿಳಿಗೇಡಿ ಮನುಷ್ಯ ನೀನು."

"ಚಿತ್ತ........ಅಗತ್ಯವಾಗಿ."

"ಮೂರು ಕಾಲಿನ ಹಸುವೆಂದರೇನಯ್ಯಾ? ಬುದ್ಧಿಯಿಲ್ಲದ ಮಾತು."

"ಚಿತ್ತ! ತಾವು ಹೇಳಿದ್ದು ಸರಿ, ಮಹಾಸ್ವಾಮಿ."

"ನಾಲ್ಕನೇ ಕಾಲು ಮುರಿದುಹೋದಷ್ಟು ಮಾತ್ರ ಅದು ವಿಚಿತ್ರ ಜಂತುವೇ? ಶುದ್ಧ ಪೆದ್ದ ನೀನು."

"ಚಿತ್ತ........ನಿಸ್ಸಂಶಯವಾಗಿ ಮಹಾಪ್ರಭೂ."

"ಅಷ್ಟೇ ಅಲ್ಲದೆ ನಾಲ್ಕನೇ ಕಾಲು ಮುರಿದಿರುವ ಹಸುವು ನಮಗೆ ಅವಶ್ಯಕವೆಂತಲೂ, ಅದನ್ನು ಕೊಂಡು ತರುವೆನೆಂದೂ ಬೇರೆ ಹೇಳುತ್ತಿರುವೆ. ಎಂಥಾ ತಿಳಿಗೇಡಿ ಆಲೋಚನೆ........"

"ಚಿತ್ತ........ಎಂಥಾ ದಡ್ಡತನದ ಆಲೋಚನೆ."

"ಮಸಲ ಅಂತಹ ಹಸು ವಿಚಿತ್ರವೆಂದು, ಅದನ್ನು ಕೊಂಡುಕೊಂಡು ತರುವಂತೆ ನಾನೇ ಹೇಳಿದನೆಂದು ಇಟ್ಟುಕೋ........"

"ಚಿತ್ತ....ಆಳುವ ಮಹಾಸ್ವಾಮಿಯವರು ಸುಳ್ಳಾಡುವರೇ? ತಾವೇ ಹೇಳಿದಿರಿ........"

"ಸರಿ, ನಾನು ಹೇಳಿದಾಕ್ಷಣ....ಇತ್ತಕಡೆ ನೋಡು, ಶೇಷಯ್ಯಾ.... ನಿನ್ನ ಬುದ್ಧಿ ಎಲ್ಲಿ ಹಾಳಾಯಿತು....ಹುಚ್ಚುಮುಂಡೇದು........"

"ಚಿತ್ತ...... ನಾನು ಆಗಲೇ ಅಂದುಕೊಂಡೆ ಮಹಾಪ್ರಭೂ."

"ಏನೆಂದು?"

"ಚಿತ್ತ........ತಾವು........"

"ಏನು ಶೇಷಯ್ಯಾ........ಏನೆಂದುಕೊಂಡೆ? ಹೇಳು ಬೇಗ........"

"ಚಿತ್ತ....ತಾವು ಮಣ್ಣು ಮುಕ್ಕುತ್ತಿರುವರೆಂದು....ಅದನ್ನು ತಪ್ಪಿಸುವ ಅವಸರ ನನಗೆ ಆಗಲೇ ತಿಳಿಯಬಂತು."



# ಷಿಕಾರಿ

"ಶೇಷಯ್ಯಾ!"

"ಪ್ರಭೂ, ನಮಸ್ತೆ."

"ಸಂತೋಷಕರವಾದ ವಾರ್ತೆ."

"ಏನದು ಪ್ರಭೂ."

"ಈ ಕಾಗದವನ್ನು ನೋಡು........ಆ ಸೀಲನ್ನು ಕಣ್ಣಿಗೆ ಒತ್ತಿಕೋ."

"ಪ್ರಭೂ, ಗೌರ್ನರ್!"

"ಹಾಂ, ಮತ್ಯಾರೆಂದುಕೊಂಡಿದ್ದೆ. ಷಿಕಾರಿ ಮಾಡಲು ಬರುವನಂತೆ.... ನಮ್ಮ ಊರಿಗೆ ......."

"ಬಹಳ ಸಂತೋಷ."

"ಗೌರ್ನರರ ಸೆಕ್ರೆಟರಿ ಬರೆದಿದ್ದಾನೆ ಈ ಕಾಗದ."

"ಚಿತ್ತ, ಚಿತ್ತ. ಪರಮಾನಂದಭರಿತನಾದೆ."

"ಎಷ್ಟೋ ದಿನಗಳಿಂದ ಆಲೋಚಿಸುತ್ತಿದ್ದೆ....ಎಲ್ಲ ಸಂಸ್ಥಾನಗಳಿಗೂ ದರ್ಶನವಿತ್ತು ನಮ್ಮನ್ನು ಏಕೆ ತಾತ್ಸಾರ ಮಾಡಿದನೋ ಎಂದು."

"ಚಿತ್ತ........ಪ್ರಭುಗಳ ಕೋರಿಕೆ ಸಿದ್ಧಿಸುವ ಮಹತ್ತರ ಸಮಯವು ಸನ್ನಿಹಿತವಾಗುತ್ತಿದೆ."

"ನಾಳೆ ಭಾನುವಾರವೇ ಬರುವನಂತೆ ಇಲ್ಲಿಗೆ– ಗೌರ್ನರು, ಪರಿವಾರ ಸಮೇತ........"

"ಚಿತ್ತ. ಧನ್ಯರಾಗುವೆವು."

"ಸೋಮವಾರ ಷಿಕಾರಿಗೆ ಹೋಗುವನಂತೆ."

"ಚಿತ್ತ. ಬಹಳ ಒಳ್ಳೆಯ ಮನುಷ್ಯನ ಹಾಗೆ ಕಾಣಿಸ್ತಾನೆ."

"ಬಹಳ ಒಳ್ಳೆಯವನು........ಇಲ್ಲದಿದ್ದಲ್ಲಿ ನಮ್ಮ ಮೇಲೆ ಇಷ್ಟು ಅಭಿಮಾನ... ...."

"ಚಿತ್ತ, ಚಿತ್ತ. ಬಹಳ ಒಳ್ಳೆಯವನೇ........"

"ನಾವು ಎಲ್ಲಾ ಸಿದ್ಧಮಾಡಬೇಕು ಆತನ ಷಿಕಾರಿಗೆ........"

"ತಪ್ಪದೆ ಮಾಡೋಣ .. ....ಪ್ರಭುಗಳು ಮನಸ್ಸು ಮಾಡಿದರೆ ......."

"ಷಿಕಾರಿ ಬಹಳ ಯಶಸ್ವಿಯಾಗಿ ನಡೆಯಬೇಕು........"

"ಓ, ಭೇಷಾಗಿ ನಡೆಸೋಣವಂತೆ."

"ಇಷ್ಟೇ ಅಲ್ಲದೆ ನಾವು ಅವರಿಗೆ ಮರ್ಯಾದೆ ಮಾಡುವದರಲ್ಲಿ ಇತರ ಸಂಸ್ಥಾನಗಳಿಗಿಂತ ಕಡಿಮೆಯಾಗಕೂಡದು. ನೋಡು, ನಾವು ಯಾವ ವಿಷಯದಲ್ಲೂ."

"ಚಿತ್ತ, ಚಿತ್ತ. ನೀವು ಹೇಳುವುದು ನಿಜವೇ ಮಹಾಸ್ವಾಮಿ. ಭಾನುವಾರವಲ್ಲವೇ ಆತ ಬರುವುದು........?"

"ಹೌದು, ಭಾನುವಾರ. ಆತ ಬಹಳ ದೊಡ್ಡಮನುಷ್ಯ, ಮಕ್ಕಳೊಂದಿಗ. ಪ್ರಜೆಗಳ ಕಷ್ಟಸುಖಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುವವನೂ ಸಹ........"

"ಹೌದು ಸ್ವಾಮಿ, ಹೌದು."

"ನಾವು ಚೆನ್ನಾಗಿ ಮರ್ಯಾದೆ ಮಾಡಬೇಕು."

"ತಪ್ಪದೆ ಮಾಡಬೇಕಾದ್ದೇ........"

"ನೀನು ಕೂಡಲೇ........"

"ನಾನು ಕೂಡಲೇ........"

"ಏನು ಮಾಡಬೇಕೋ ಎಲ್ಲಾ ನೋಡಿಕೋ."

"ತಪ್ಪದೆ ನೋಡಿಕೊಳ್ಳುತ್ತೇನೆ ಬುದ್ಧೀ, ಪ್ರಭುಗಳು ಹೇಳಿದರೆ...."

"ಮತ್ತೆ ಯಾಕೆ ಇನ್ನೂ ಹಾಗೇ ನಿಂತುಕೊಂಡಿದ್ದೀಯೇ?"

"ಚಿತ್ತ........ನನಗೊಂದು ಸಣ್ಣ ಸಂದೇಹ ಬಂತು."

"ಸಣ್ಣದೋ........ದೊಡ್ಡದೋ........"

"ಅಬ್ಬ, ಸಣ್ಣದೇ........"

"ಏನದು?"

"ಆತನು ಬರುವುದೂ, ನಾವು ಮರ್ಯಾದೆ ಗಿರ್ಯಾದೆ ಮಾಡುವುದೂ ಎಲ್ಲಾ ಸೊಗಸಾಗಿ ನಡೆಯುವುದೆಂದು ಭಾವಿಸಿ........"

"ಅಷ್ಟೆ. ಆದಕ್ಕಿಂತಲೂ ಮತ್ತೇನಿದೆ? ಬರ್ತ್ತಾನೆ, ಮರ್ರ್ಯಾದೆ ಹೊಂದು ತ್ತಾನೆ. ಷಿಕಾರಿ ಮಾಡಿಕೊಂಡು ಮತ್ತೆ ಊರಿಗೆ ಹೊರಡುತ್ತಾನೆ."

"ಅಲ್ಲೇ ನನಗೆ ಅರ್ಥವಾಗಲಿಲ್ಲ."

"ಏನು ಅರ್ಥವಾಗಲಿಲ್ಲ?"

"ಷಿಕಾರಿ, ಷಿಕಾರಿ ಅಂತಾನೆ, ಇಲ್ಲಿ ಏನು ಷಿಕಾರಿ ಮಾಡುತ್ತಾನೆ ನನ್ನ ತಲೆ........"

"ಶೇಷಯ್ಯಾ!"

"ಪ್ರಭೂ, ಗಾಬರಿ ಬೀಳಬೇಡಿ........ಏನು ಷಿಕಾರಿ ಆಡ್ತಾನೆ?"

"ನಮ್ಮ ಸಂಸ್ಥಾನದಲ್ಲಿ ಹುಲಿ, ಸಿಂಹಗಳು ಇಲ್ಲವೆ?"

"ಕಾಡುಹಂದಿಗಳೂ, ತೋಳಗಳೂ ಇಲ್ಲ."

"ದುಪ್ಪಿಗಳೂ, ಜಿಂಕೆಗಳೂ ಇಲ್ಲವೆ?"

"ಸುಂಡಿಲಿ, ಮೂಗಿಲಿಗಳೂ ಇಲ್ಲ."

"ಶೇಷಯ್ಯಾ, ಎಲ್ಲಾ ಅಯೋಮಯವಾಗಿ ಅಭಾಸವಾಗುವ ಹಾಗಿದೆ. ಏನೂ ಇಲ್ಲದಿದ್ದಲ್ಲಿ ಏನು ಷಿಕಾರಿ ಮಾಡುತ್ತಾನೆ? ಆಶಾಭಂಗವಾಗಿ........"

"ಪ್ರಭೂ, ನನಗೆ ಸ್ವಲ್ಪ ಅರ್ಥವಾಗುತ್ತಿದೆ."

"ಅರ್ಥವಾಗುತ್ತಿದೆಯೋ? ಶೇಷಯ್ಯ ಹೇಳು....ಬೇಗ ಹೇಳು........ ಏನಾದರೂ ಇರುವುದೇ ಇಲ್ಲಿ ಬೇಟೆಯಾಡಲು........?"

"ಇದೇ ಮಹಾಪ್ರಭೂ! ನಿಮಗಿನ್ನೂ ಹೊಳೆಯಲಿಲ್ಲವೇ?"

"ಏನದು ಶೀಘ್ರವಾಗಿ ಹೇಳು."

"ನಮ್ಮನ್ನು ಷಿಕಾರಿ ಮಾಡುತ್ತಾನೆ– ವಾರ್ ಫಂಡಿಗಾಗಿ."

# ತಾಜಮಹಲು

"ಶೇಷಯ್ಯಾ! ಹಾಳು ನಿದ್ರೆ ಒಂಬತ್ತು ಗಂಟೆಯಾದರೂ........ನಿನ್ನನ್ನೇ! ಈ ದಿನ ನಾವು ನಮ್ಮ ಸಂಸ್ಥಾನಕ್ಕೆ ಹಿಂದಿರುಗುತ್ತಿರುವೆವು........ಮರೆತು ಬಿಟ್ಟೆಯಾ?"

"ಊಂ. ಅಬ್ಬಾ, ಇಂದು ನಿಲ್ಲಿಸಿಬಿಡೋಣ ಪ್ರಯಾಣ........ಬಹಳ ಬೇಜಾರಾಗಿದೆ........"

"ತಾಜಮಹಲು ಹೋಟಲ್ ನಿನಗೆ ಚೆನ್ನಾಗಿ ಹೊಂದಿಕೊಂಡಿದೆ ಎಂದಾಯಿತು........ಏಳು."

"ಎದ್ದೆ ಮಹಾಸ್ವಾಮಿ. ಹೊರಡಿ....ಸಾಯಿಸಿ....ತುಂಡರಿಸಿ........"

"ಎಷ್ಟು ಕೋಪ! ಇನ್ನೂ ನಮಗೆ ಎಷ್ಟು ಕೆಲಸಗಳಿವೆ....ಸರಿ.... ಶೇಷಯ್ಯಾ!"

"ಏನು ಸ್ವಾಮಿ........ಮತ್ತೆ ಹೊಸ ಉಪದ್ರವ........"

"ಸಣ್ಣ ವಿಷಯ. ನಮ್ಮ ಸಂಸ್ಥಾನದಲ್ಲಿ........ನಮ್ಮ ಊರಿನಲ್ಲೂ ಸಹಾ ಇಂತಹ ತಾಜ್‌ಮಹಲ್ ಹೋಟಲೊಂದು........"

"ಓಹೋ! ಇದನ್ನು ಕೇಳಲೋಸುಗವೇ ನನ್ನನ್ನು ಎಚ್ಚರಿಸಿದ್ದು?"

"ಏನು ಹೇಳುವೆ ಶೇಷಯ್ಯಾ! ನಮ್ಮೂರಿನಲ್ಲೂ ಸಹ ಒಂದು ತಾಜ್ ಮಹಲ್ ಹೋಟಲ್........ಇದೇ ಮಾದರಿಯಾದದ್ದು – ಎದುರಾಗಿ ಆ ಗೇಟ್‌ವೇ ಅಂತಹ ಕಟ್ಟಡ, ಸಮುದ್ರತರಂಗಗಳು........"

"ನನ್ನ ಶ್ರಾದ್ಧ! ಅಳು ಬರುತ್ತದೆ....ನಿದ್ದೆಕಣ್ಣಿನಲ್ಲಿ ನನಗೇನೀ ಅವಸ್ಥೆ ........ಬಹಳ ಭಾರೀ ಕೆಲಸವಿರುವ ಹಾಗೆ ನನ್ನ ನಿದ್ರೆಯನ್ನು ಹಾಳುಮಾಡಿ

ದಿರಿ. ತಾಜ್‌ಮಹಲ್ ಹೋಟಲ್ ಕಟ್ಟಿಸುವುದು ಸುಲಭವೇ – ಎಲ್ಲಿ ಒಂದು ತಾಜಮಹಲನ್ನು ನಿರ್ಮಿಸಿ ನೋಡೋಣ........"

"ಶೇಷಯ್ಯಾ....ಸರಿಯಾದ ಮಾತನ್ನಾಡಿದೆ........ಇಷ್ಟರವರೆವಿಗೂ ನನಗೆ ಆ ಮಾತು ಗೋಚರಿಸಲೇ ಇಲ್ಲ."

"ದಮ್ಮಯ್ಯಾ, ಸುಮ್ಮನಿರಿ ಬುದ್ಧೀ. ಮಣ್ಣುಮುಕ್ಕಿ ಹೇಳಿದೆ. ವಾಪಸು ತೆಗೆದುಕೊಳ್ಳುತ್ತಿದ್ದೇನೆ........"

"ಏಕೆ, ಹಾಗೇ........"

"ನಿಮ್ಮೊಂದಿಗೆ ಬಲು ಪೇಚಾಟ. ಮಾತು ಆಡಿದರೆ ಜಿಗಣೆ ಹಿಡಿದ ಹಾಗೆ ಹಿಡಿದುಕೊಂಡು ಬಿಡ್ತೀರಿ."

"ಶೇಷಯ್ಯಾ....ನಾವೂ ಒಂದು ತಾಜಮಹಲನ್ನು........"

"ಅಲ್ಲಾ ಮಹಾಸ್ವಾಮಿ........ತಾಜ್‌ಮಹಲ್ ಹೋಟಲನ್ನು........"

"ಅಲ್ಲಾ ಶೇಷಯ್ಯಾ! ತಾಜಮಹಲ್ – ಆಗ್ರಾನಗರದಲ್ಲಿ ನೋಡ ಲಿಲ್ಲವೇ ಅಂಥಾ ' ಕಟ್ಟಡವನ್ನು........"

"ಕ್ಷಮಿಸಿ. ನೀವೇನು ಮಾತನಾಡುತ್ತಿರುವರೋ ನಿಮಗೇ ತಿಳಿ ಯದು."

"ನನಗೆ ತಿಳಿದಿದೆ ಶೇಷಯ್ಯಾ! ಅದೇ....ಆಗ್ರಾ ನಗರದಲ್ಲಿ ನಾವೂ ನೋಡಲಿಲ್ಲವೇ........ಆ ಯಮುನಾನದಿ ದಡದಲ್ಲಿ........"

"ಅದರ ಪ್ರಸ್ತಾಪ ಮಾಡಬೇಡಿ........ಅನಿಷ್ಟ........"

"ಅಂತಹದೊಂದು ನಮ್ಮ ಸಂಸ್ಥಾನದಲ್ಲಿ ನಿರ್ಮಿಸಬೇಕು........"

"ಪ್ರಭು! ಶಾಂತಂ ಪಾಪಂ........"

"ಏನು ಹುಚ್ಚನ ಹಾಗೇ, ನಾಟಕದಲ್ಲಿ ಪಾತ್ರಧಾರನ ಹಾಗೆ."

"ಪ್ರಭು, ನೀವು ತಾಜಮಹಲನ್ನು ಮರೆತುಬಿಡಬೇಕು. ಬೇಕಾದರೆ ಈ ರೀತಿಯ ತಾಜ್‌ಮಹಲ್ ಹೋಟಿಲುಗಳನ್ನು ಬೇಕಾದಷ್ಟು ನಿರ್ಮಿ ಸೋಣ........"

"ಊಹುಂ. ನನಗೆ ತಾಜಮುಹಲೇ ಬೇಕು......."

"ಅಯ್ಯೋ! ನಿಮಗೆ ಅರ್ಥವಾಗಲಿಲ್ಲವೇ........"

"ನಿಲ್ಲಿಸು ಶೇಷಯ್ಯಾ, ನೀನು ಯಾವಾಗಲೂ ನಾನು ಏನು ನೆನೆಸಿದರೂ, ಯಾವುದರ ಮೇಲೆ ಆಸೆ ತೋರಿಸಿದರೂ ಹೀಗೆ ಉತ್ಸಾಹಭಂಗ ಮಾಡುವೆ. ಇದೋ, ನನ್ನ ಕೊನೆಯ ಮಾತು! ಇಪ್ಪತ್ತುನಾಲ್ಕು ಗಂಟೆಗಳಲ್ಲಿ ನಮ್ಮ ಊರಿನಲ್ಲಿ ಅಂಥಹ – ಆ ಆಗ್ರಾ ನಗರದಲ್ಲಿರುವಂಥಹ – ತಾಜಮಹಲ್‌ಗೆ ಅಸ್ತಿಭಾರ ಹಾಕಬೇಕು. ತಿಳಿಯಿತೇ?"

"ಪ್ರಭೂ, ಇದು ಅಸಂಭವ. ಅನ್ಯಾಯ, ಘೋರ! ನೀವೇನು ಆಡುತ್ತಿರುವಿರೋ ನಿಮಗೆ ತಿಳಿಯದು........"

"ಇನ್ನು ನಿನ್ನ ಮಾತು ನಿಲ್ಲಿಸು........ನಾನೆಲ್ಲಾ ನಿಶ್ಚಯಿಸಿಕೊಂಡಿದ್ದೇನೆ."

"ಆ ವಿಷಯವೂನೇ........"

"ಏನು ವಿಷಯ?........ಯಾವ ವಿಷಯವಯ್ಯಾ ಅದು........?"

"ಆಕೆಯ ಸಂಗತಿ........ಶ್ರೀ ಮಹಾರಾಣಿಯವರ ಸಂಗತಿ........"

"ಏನದು ಹಾಗೆ ನೋಡುತ್ತಿರುವೆ....ಆಕೆಗೇನು ಸಂಭವಿಸಿದೆ........?"

"ಆಕೆ ಜೀವಿಸಿರುವಾಗ ನೀವು ತಾಜಮಹಲ್ ಹೇಗೆ ಕಟ್ಟಿಸಲು ಸಾಧ್ಯ??"



# ಚಲಚ್ಚಿತ್ರೋದ್ಯಮ

"ಶೇಷಯ್ಯಾ"

"ಪ್ರಭೂ."

"ಈ ಪೇಪರಿನಲ್ಲಿರುವ ಫೋಟೋ ನೋಡು........ಯಾರು ಈ ಸುಂದರಿ?"

"ಪ್ರಸಿದ್ಧ ಸಿನಿಮಾ ತಾರೆ, ಮಹಾಸ್ವಾಮಿ........ಆಕೆಯ ವಾಸಸ್ಥಳ ಬೊಂಬಾಯಿ........"

"ನಮ್ಮ ಸಂಸ್ಥಾನದಲ್ಲಿ ಇಷ್ಟು ಸುಂದರಿಯರು ಯಾರಾದರೂ ಇರುವರೇ?"

"ಆಕೆಗಿಂತಲೂ ಅಂದಗಾತಿಯರಿದ್ದಾರೆ."

"ಈಕೆಯಂತೆಯೇ ಸಿನಿಮಾದಲ್ಲಿ ನಟಿಸುವರೇ?"

"ನಟಿಸುವುದಿಲ್ಲ, ಸ್ವಾಮಿ........ಚಲನ ಚಿತ್ರಗಳಲ್ಲಿ ಪಾತ್ರ ವಹಿಸುವುದೆಂದರೇನೋ ಅವರಿಗೆ ತಿಳಿಯದು........ಇಷ್ಟು ಮಾತ್ರ ಹೇಳಬಲ್ಲೆ, ಆಕೆಗಿಂತಲೂ ಸೊಗಸುಗಾತಿಯರಿದ್ದಾರೆ ನಮ್ಮ ಸಂಸ್ಥಾನದಲ್ಲಿ."

"ಏನು ಭಾಗ್ಯ? ಎಷ್ಟು ಅಂದವಿದ್ದರೇನು, ಚಲನ ಚಿತ್ರಗಳಲ್ಲಿ ನಟಿಸದಿದ್ದರೆ........ನಾವು ಕಚ್ಚಿಕೊಂಡು ತಿನ್ನುತ್ತೇವೆಯೆ ಆ ಅಂದವನ್ನು........!"

"ಚಿತ್ತ........ಮಹಾಸ್ವಾಮಿ."

"ಚಲನ ಚಿತ್ರದಲ್ಲಿ ಪಾತ್ರ ವಹಿಸುವುದಿಲ್ಲವಂತೆ!........ಅಲ್ಲ, ಅದು ಯಾಕೆ ಶೇಷಯ್ಯಾ, ಹಾಗೆ?"

"ಸ್ವಾಮಿ ಅವರರಿಯರು ಆ ವಿದ್ಯೆ! ನಮ್ಮ ಸಂಸ್ಥಾನದಲ್ಲಿ ಆ ಪರಿಶ್ರಮವಿಲ್ಲ........"

"ನಾಚಿಕೆಗೇಡು........ಎಷ್ಟು ಜನ ರೂಪವತಿಯರು ಫಿಲಂನಲ್ಲಿ ನಟಿಸದೆ ಹಾಳಾಗುತ್ತಿರುವರು."

"ಆದರೆ ಮಹಾಪ್ರಭೂ, ಒಂದು ಮಾತು. ತಮ್ಮ ಹೊರತು ಅವರ್‍ಯಾರೂ ಚಲನ ಚಿತ್ರಗಳಲ್ಲಿ ಪಾತ್ರವಹಿಸಲು ಹಾತೊರೆಯುತ್ತಿಲ್ಲ. ಅವರವರ ಸಂಸಾರಗಳಲ್ಲಿ ಅವರು ತೃಪ್ತಿಪಟ್ಟುಕೊಂಡು ಸೌಖ್ಯದಿಂದಿದ್ದಾರೆ."

"ಶೇಷಯ್ಯಾ, ಇದು ನಿಜವಾಗಿ ನಾವು ತಲೆ ತಗ್ಗಿಸಬೇಕಾದ ವಿಷಯ. ನಮ್ಮ ಹೆಂಗಸರು ಈ ರೀತಿ ಹಿಂದೆ ಬಿದ್ದಿರುವರೆಂಬ ವಿಷಯ ನನಗೆ ತಿಳಿದಿರಲಿಲ್ಲ."

"ಅಲ್ಲವೇ ಮತ್ತೆ........ತಮಗೆ ತೀರಾ ಕಳವಳ."

"ಇಂದಿನವರೆವಿಗೆ ನೀನೀ ವಿಷಯವನ್ನು ನನಗೆ ತಿಳಿಸದೆ ಕಾಲಹರಣ ಮಾಡಿದ್ದಕ್ಕೆ........"

"ಇಲ್ಲಾ, ಮಹಾಪ್ರಭೂ........ತಪ್ಪಾಯಿತು."

"ಶೇಷಯ್ಯಾ."

"ತಕ್ಷಣ ನಮ್ಮ ಸಂಸ್ಥಾನದಲ್ಲಿ ಈ ಉದ್ಯಮವನ್ನು ಸ್ಥಾಪಿಸಬೇಕು."

"ಮಹಾಸ್ವಾಮಿ, ಸ್ಥಾಪಿಸಬೇಕೆ? ಈಗಲೇ?"

"ಕೂಡಲೇ....ತಕ್ಷಣ........ನೀನು ಹೋಗಿ ನಟನಟಿಯರನ್ನು ಬುಟ್ಟಿಯಲ್ಲಿ ಹಾಕಿಕೊಂಡು ಬಾ."

"ನಾನೇ!.......ಮಹಾಸ್ವಾಮಿ........"

"ಹೌದು, ರಾಯರೇ! ಹೋಗು........ಮರುಮಾತಾಡಬೇಡ."

"ನನ್ನ ಎದೆ ಡವಡವನೆ ಬಡಿದುಕೊಳ್ಳುತ್ತಿದೆ."

"ಓ........ಅದೇನು ಚಿಂತೆಯಿಲ್ಲ........ಸರಿ........ಯಾರನ್ನು ಡೈರೆಕ್ಟರನ್ನಾಗಿ ನೇಮಿಸೋಣ?"

"ನಮ್ಮ ಸಂಸ್ಥಾನದಲ್ಲಿ ಆ ಕುಶಲ ವಿದ್ಯೆಯನ್ನು ಕಲಿತವರು ಯಾರೂ ಇಲ್ಲ, ಮಹಾಪ್ರಭೂ."

"ಸರಿ. ಯಾರೂ ಇಲ್ಲದಿದ್ದರೆ ಬೇಡ, ನೀನು ಸರ್ವಜ್ಞ........ಎಲ್ಲ ಕೆಲಸಕಾರ್ಯಗಳಿಗೂ ಸರಿಯಾದವನು........ನಿನ್ನನ್ನು ಡೈರೆಕ್ಟರನನ್ನಾಗಿ ನೇಮಿಸಿದ್ದೇನೆ."

"ಪ್ರಭೂ, ಇಷ್ಟು ದೌರ್ಜನ್ಯ ಕೂಡದು........ಈ ಆಜ್ಞೆ........

"ಹಾಂ........ಏನು?"

"ಅಲ್ಲ ಮಹಾಪ್ರಭೂ, ನನಗೆ ಡೈರೆಕ್ಟರ ಕೆಲಸವೆಂದರೇನೋ ತಿಳಿಯದು. ನಾನು ಮಂತ್ರಿ ಕಾರ್ಯಭಾರವನ್ನು ಸಲೀಸಾಗಿ ನಡೆಸಲು ನನಗೆ ತಾವು ಅವಕಾಶ ಕೊಡುವುದಿಲ್ಲವೆಂದು ಕಾಣುವುದು."

"ಪರವಾಯಿಲ್ಲ .......ಎರಡು ಕೆಲಸಗಳನ್ನೂ ನೀನೇ ನೋಡಿಕೊಳ್ಳಬಹುದು."

"ನನಗೆ ಫಿಲಂ ಡೈರೆಕ್ಟರ ಕೆಲಸವೆಂದರೆ ಸುತರಾಂ ತಿಳಿಯದು, ನನ್ನೊಡೆಯಾ."

"ಯಾರಿಗೂ ತಿಳಿಯುವುದಿಲ್ಲ ಮೊದಲು....ಅಭ್ಯಾಸವಾಗಬೇಕು........ ಕಲಿತುಕೊಳ್ಳುವಿಯಂತೆ ಬೇಗ .......ಭಯಪಡಬೇಡ."

"ಈ ವೃದ್ಧನನ್ನು ನಿಶ್ಚಿಂತೆಯಾಗಿ ಬಾಳಗೊಡಲಾರಿರಾ?"

"ಶೇಷಯ್ಯಾ, ನಿನ್ನ ಶಾಂತ ಜೀವನಕ್ಕೆ ಭಂಗವೇನೂ ಬರಲಾರದು.... ಹೊರಡು ಮತ್ತೆ."

"ನನ್ನ ಜೀವ ನಿಮ್ಮ ಕೈಯಲ್ಲಿದೆ!....ಏನು ಮಾಡುವಿರೋ........?"

"ಭಯಪಡಬೇಡ........ನೋಡು! ನಾವು ತೆಗೆಯುವ ಚಿತ್ರಕ್ಕೆ ಈ ಪೇಪರಿನಲ್ಲಿ ಅಚ್ಚಾಗಿರುವ ನಟೀಮಣಿಯಂತಹ ಸುರೂಪಿಯೇ ಆಗಬೇಕು."

"ಅಪ್ಪಣೆ ಮಹಾಪ್ರಭೂ."

"ಎಲ್ಲಿ ಸಿಕ್ಕುವರು ಇಂತಹ ಸುಂದರ ರಮಣಿಯರು?"

"ಶೋಧಿಸಬೇಕು, ಮಹಾರಾಜ. ಹುಡುಕಾಡಬೇಕು."

"ಏಕ ಅಷ್ಟು ಫಜೀತಿ? ನಮ್ಮ ಸಂಸ್ಥಾನದಲ್ಲಿ ಈ ರಮಣೀಮಣಿಯನ್ನು ಹೋಲುವ ಸುಂದರಿಯರು ಯಾರಿದ್ದಾರೋ ನಿನಗೆ ತಿಳಿಯದೆ?"

"ನನಗೆ ಹೇಗೆ ತಿಳಿಯುತ್ತದೆ ಮಹಾಪ್ರಭೂ........ಸುಂದರ ಯುವತಿಯರು ಇದ್ದ ಮಾತ್ರಕ್ಕೆ ಸರಿಯಲ್ಲ. ಅವರು ಚಲನ ಚಿತ್ರದಲ್ಲಿ ಪಾತ್ರ ವಹಿಸಲು ಅಂಗೀಕರಿಸಬೇಕು."

"ಬಾಯಿ ಮುಚ್ಚಿಕೊಂಡು ಅಂಗೀಕರಿಸುವರು. ನಾವೇನು ಅವರನ್ನು ನುಂಗಿಬಿಡುತ್ತೇವೆಯೇ? ........ಬರ್‍ತಾರೆ........ಸ್ವಲ್ಪ ಹೊತ್ತು ನಟಿಸುತ್ತಾರೆ ........ನಾಲ್ಕು ಹಾಡು ಹೇಳಿ ನಾವು ಕೊಟ್ಟ ಸಂಭಾವನೆಯನ್ನು ತೆಗೆದುಕೊಂಡು ಹೋಗುತ್ತಾರೆ. ಇದರಲ್ಲೇನು ಮಹಾ ವಿಶೇಷವಿದೆ?"

"ಏನಿಲ್ಲ ಮಹಾಪ್ರಭೂ........ಆದರೂ ಅವರಿಗೆ ಈ ವಿಷಯಗಳು ಅರ್ಥವಾಗಬೇಡವೇ?"

"ಹೌದು ಮತ್ತೆ........ನೀನು ಅರ್ಥವಾಗುವಂತೆ ಹೇಳಬೇಕು........ ಸರಿ. ಎಲ್ಲಿ ಯಾರು ಅಂದಗಾತಿಯರು ಇರುವರೋ ಸ್ವಲ್ಪ ಯೋಚಿಸಿ ಹೇಳು........"

"ಮಹಾಪ್ರಭೂ, ನನಗೆ ಹೇಗೆ ತಾನೇ ತಿಳಿಯುವುದು?"

"ಇಷ್ಟೇನೇ ನಿನ್ನ ಬುರುಡೆ...........ಗಾಳಿಸಮಾಚಾರದಿಂದ ಅಷ್ಟು ವಿಷಯವಾದರೂ ತಿಳಿಯಲಾರದೆ?"

"ಅಲ್ಲಲ್ಲಿ ಒಂದಿಬ್ಬರು ರೂಪಸಿಯರಿರಬಹುದು."

"ಅದನ್ನು ನೀನೇ ಹೇಳಬೇಕಾಗಿತ್ತಲ್ಲವೆ? ಯಾರೂ, ಎಲ್ಲಿ, ಅಂತ ಕೇಳಿದೆ."

"ಅಸಮಾನ ಸುಂದರಿಯರು ಒಂದಿಬ್ಬರು ಮಾತ್ರ ನಮ್ಮ ಸಂಸ್ಥಾನದಲ್ಲಿರಬಹುದು ಅಷ್ಟೇ."

"ಅಷ್ಟೇ....ನಮಗೆ ಬೇಕಾದದ್ದೂ ಒಂದಿಬ್ಬರು ಮಾತ್ರ........ಒಂದು ಮಂದೆಯನ್ನು ಇಟ್ಟುಕೊಂಡು ನಾವಾದರೂ ಏನು ಮಾಡಬೇಕು?"

"ಮುಮ್ಮಾತಿಗೂ ನಿಜ, ಮಹಾಸ್ವಾಮಿ."

"ಅವರಲ್ಲಿ ಯಾರಾದರೂ ಗೊತ್ತೇ ನಿನಗೆ?"

"ಹೂಂ........ತಿಳಿದಿದೆ........"

"ಭೇಷ್....ಆಕೆಯ ಪತಿ ಆಕೆಯನ್ನು ಚಿತ್ರರಂಗದಲ್ಲಿ ಪ್ರವೇಶಿಸಲು ಅನುಮತಿ ಕೊಡುತ್ತಾನೆಯೆ ?"

"ಚಿತ್ತ........ನಿಸ್ಸಂದೇಹವಾಗಿ ಅಂಗೀಕರಿಸುತ್ತಾರೆ........ಆಕೆಯನ್ನು ನಾವು ಮೊದಲು 'ಬುಕ್' ಮಾಡಿದರೆ, ಅನೇಕ ತರುಣಿಯರು ಆಕೆಯನ್ನು ಅನುಸರಿಸುವರು."

"ಹಾಗಾದರೆ, ಕಾಲ ಕಳೆಯಬೇಡ. ಕೂಡಲೇ ಆಕೆಯನ್ನು ಗೊತ್ತು ಮಾಡಿಬಿಡು. ಅಲ್ಲ........ಯಾರಾಕೆ ?........ಬಹಳ ಚೆನ್ನಾಗಿರುತಾಳೆಯೇ ? ಈ ಪೇಪರಿನಲ್ಲಿರುವ ಸುಂದರೀಮಣಿಯ ಹಾಗೆ?"

"ಥು........ಅದೇನು ಬಿಡಿ........ಆಕೆ ಮತ್ತಷ್ಟು ಅಂದವಾಗಿರುತ್ತಾಳೆ. ಆಕೆಯ ಪತಿರಾಯರಿಗೂ ಸಹ ಫಿಲಂ ಪರಿಶ್ರಮವೆಂದರೆ ಬಹಳ ಖಾಯಿಷ್."

"ಶೇಷಯ್ಯಾ........ಹಾಗಾದರೆ ಕಾಲಹರಣ ಕೂಡದು........ಈಗಲೇ ಹೋಗು....ಹಾಗೇ ಹೋಗುವ ಮುನ್ನ ಆಕೆಯು ಯಾರೋ ಹೇಳಿಬಿಡು...."

"ನಾನೆಲ್ಲಿಗೂ ಹೋಗಬೇಕಾಗಿಲ್ಲ....ನಿಮ್ಮ ಅಂತಃಪುರದಲ್ಲೇ ಇದ್ದಾರೆ ಸ್ವಾಮಿ."

"ಏನು........ನಮ್ಮ ಅಂ........"

"ಹೌದು........ಮಹಾಪ್ರಭೂ."

"ಹೇಳು ಶೇಷಯ್ಯಾ........ಬಾಯಿಬಿಡು ಬೇಗ........ಯಾರಾಕೆ ?"

"ಮಹಾಪ್ರಭೂ........ನನಗೆ ಅಭಯದಾನ ಮಾಡಿದಹೊರತು ನಾನು ಹೇಳ........"

"ಒಳ್ಳೇ ಶನಿ ನೀನು....ನನ್ನ ಕುತೂಹಲ ಕೆರಳುತ್ತಿದೆ........ಅಭಯ ವನ್ನು ದಯಪಾಲಿಸಿದ್ದೇನೆ, ಹೇಳು."

"ಮತ್ತೆ ಯಾರೂ ಅಲ್ಲ ಪ್ರಭೂ....ತಮ್ಮ ರಾಣೀ ಸಾಹೇಬರು...."



# ಘನ ಪದಾರ್ಥಗಳು

"ಶೇಷಯ್ಯಾ!"

"ಪ್ರಭೂ."

"ಒಂದೊಂದು ಸಾರಿ ನಮ್ಮನ್ನು ಕುರಿತು ನಾವೇ ಆಲೋಚಿಸಿಕೊಳ್ಳುತ್ತಿದ್ದರೆ ಬಹಳ ವಿಚಿತ್ರವಾಗಿರುತ್ತೆ, ಕಂಡೆಯಾ........"

"ಹೌದು, ಇರುತ್ತದೆ ಸ್ವಾಮಿ."

"ನೀನೆಂದಾದರೂ ನಿನ್ನನ್ನು ಕುರಿತು ನೀನು ಆಲೋಚಿಸಿಕೊಂಡೆಯಾ........?"

"ಚಿತ್ತ. ಆಗಾಗ ಹಾಗೆ ಮಾಡುತಿರುತ್ತೇನೆ ಬುದ್ಧೀ."

"ನಿನ್ನೆ ರಾತ್ರಿ ಹಾಗೆ ಮಾಡಿಕೊಂಡೆಯೋ?"

"ಚಿತ್ತ, ಚಿತ್ತ....ತಮಗೆ ಹೇಗೆ ತಿಳಿಯಿತು ಮಹಾಸ್ವಾಮಿ."

"ನಿನ್ನ ಮುಖ ಹೇಳುತ್ತದೆ."

"ಹಾಗಾದರೆ ತಾವೂ ನಿನ್ನೆ ರಾತ್ರಿ ತಮ್ಮನ್ನು ಕುರಿತು ಆಲೋಚಿಸಿಕೊಂಡೇ ಇರುವಿರಿ."

"ಕೊಟ್ಟೆ ಏಟು ಶೇಷಯ್ಯಾ, ಈ ರಹಸ್ಯ ನಿನಗೆ ಹೇಗೆ ತಿಳಿಯಿತು?"

"ಊಹೆ ಮಹಾಸ್ವಾಮಿ! ಊಹೆ ಬಹಳ ವಿಚಿತ್ರವಾದದ್ದೆಂದು ತಾವೇ ಹೇಳಿದ್ದಿರಿ ಎಂದೋ........"

"ಹೌದು. ಒಳ್ಳೇ ಸಮಯಕ್ಕೆ ಜ್ಞಾಪಕ ಮಾಡಿದೆ........ಊಹೆ ಎಂಬುದು ಬಹಳ ಪ್ರಬಲವಾದ ಶಕ್ತಿ, ಶೇಷಯ್ಯಾ."

"ಪ್ರಭೂ, ಸರಿಯಾಗಿ ಹೇಳಿದಿರಿ."

"ಊಹೆಯಿಂದ ಪ್ರತಿ ವ್ಯಕ್ತಿಯೂ ದಿನಕ್ಕೆ ಎರಡು ಅಂಗುಲದಂತೆ ವಿಸ್ತಾರ ಬೆಳೆಯಬಹುದು."

"ಸರಿಯಾದ ಮಾತು."

"ದೊಡ್ಡದೊಡ್ಡ ಮನುಷ್ಯರೆಲ್ಲಾ ದೊಡ್ಡದೊಡ್ಡವರು ಹೇಗಾದರು ಗೊತ್ತೇ?"

"ಚಿತ್ತ. ಹೇಳಿದರೆ ತಿಳಿದುಕೊಳ್ಳುತ್ತೇನೆ........"

"ಊಹೆಯಿಂದ! ಶೇಷಯ್ಯಾ, ಊಹೆಯಿಂದ ನಾವು ಏನು ಬೇಕೆಂದರೆ ಅದಾಗಬಹುದು. ನಮ್ಮ ಮನೋನಿಶ್ಚಯದಲ್ಲಿದೆ ಪ್ರತಿಯೊಂದು. ....ಮನಸ್ಸಿನಂತೆ ಮಹದೇವ ಅಂತಾರಲ್ಲ ಹಾಗೆ."

"ಚಿತ್ತ........ಅಷ್ಟೇ ಬುದ್ಧೀ."

"ನೀನು ಹೇಳಿದಂತೆ ನಾನು ನಿನ್ನೆ ರಾತ್ರಿ ನನ್ನನ್ನು ಕುರಿತು ಊಹಿಸಿಕೊಂಡೆ. ಪ್ರಸ್ತುತ ಸ್ಥಿತಿಗಿಂತಲೂ ನಾವು ಎಷ್ಟೋ ಪ್ರಗತಿಪರವಾಗಿ ನಡೆಯಲು ಅನೇಕ ಮಾರ್ಗಗಳು ಕಾಣಿಸಿದವು."

"ಚಿತ್ತ. ಒಂದು ಕತ್ತೆ ಇದೆ ಎಂದು ತಿಳಿಯೋಣ........ಕೇಳುತ್ತಿದ್ದೀಯಾ ಶೇಷಯ್ಯಾ."

"ಚಿತ್ತ. ಕೇಳುತ್ತಿದ್ದೇನೆ. ಒಂದು ಕತ್ತೆಯಿದೆ ಎಂದು ನೆನೆಸಿಕೊಳ್ಳುವಂತೆ ಹೇಳಿದರಲ್ಲವೇ ತಾವು."

"ಹೌದು ಒಂದು ಕತ್ತೆಯಿದೆ ಎಂದುಕೋ."

"ಅಂದುಕೊಂಡೆ ಪ್ರಭು! ಒಂದು ಕತ್ತೆಯಿದೆ."

"ರೈಟ್! ಆ ಕತ್ತೆಗೆ ಊಹಾಶಕ್ತಿ ಬಹಳ ಕಮ್ಮಿ........ಇರುವ ಊಹಾಶಕ್ತಿಯನ್ನು ಅದು ಸರಿಯಾದ ರೀತಿಯಲ್ಲಿ ವಿನಿಯೋಗಿಸಿಕೊಳ್ಳಲಾರದಷ್ಟೇ ಅಲ್ಲದೆ ಕಸಕಡ್ಡಿಗಳ ಕಡೆ ಓಡಿಸುತ್ತದೆ."

"ಬಹಳ ಹೀನವಾದ ಕೆಲಸ."

"ನಾವು ಮನುಷ್ಯರು ಇದ್ದೇವೆ ನೋಡು........ನಮ್ಮ ಪದ್ಧತಿಯೇ ಬೇರೆ........"

"ಕಾಣಿಸುತ್ತಲೇ ಇದೆ ಸ್ವಾಮಿ, ಬೇಧ!"

"ನಮ್ಮ ಊಹಾಶಕ್ತಿ ಕೋಟೆಯ ಗೋಡೆಗಳನ್ನು ದಾಟುತ್ತದೆ. ಆಕಾಶಸೌಧಗಳನ್ನು ಭೇದಿಸಿಕೊಂಡು ಓಡುತ್ತದೆ."

"ನಿಜ ಸ್ವಾಮಿ, ನಿಜ."

“ಊಹೆಯಿಂದ ನಾವು ಸರ್ವವನ್ನೂ ಜಯಿಸಿದೆವು........ಊಹೆಯಿಂದ ನಾವು........

“ಪ್ರಭೂ! ದೇವಿಯವರು ಬರುತ್ತಿರುವಂತಿದೆ.”

“ಬರಲಿ, ಭಯವೇನು?”

“................”

“ದೇವಿ ಮಹಾಪತಿವ್ರತೆ ಶೇಷಯ್ಯಾ.”

“ಚಿತ್ತ....ಹೌದು ಮಹಾಸ್ವಾಮಿ.”

“ದೇವಿ ಊಹೆಗಿಂತಲೂ ಹೆಚ್ಚು, ಊಹೆಗಿಂತಲೂ ಚಮತ್ಕಾರವಾದವಳು, ಊಹೆಗಿಂತಲೂ ಮಹತ್ತರವಾದವಳು.”

“........ಏನು ಹೇಳುತ್ತಿದ್ದಾಳೆ ದೇವಿ?”

“........ಚಿತ್ತ. ಊಟಕ್ಕೆ ಬರಹೇಳುತ್ತಿದ್ದಾರೆ.... ...”

“ಏಳು ಹಾಗಾದರೆ........ಹನ್ನೆರಡು ಗಂಟೆ ಮೀರಿದೆ........”

“ಚಿತ್ತ.”

“ಊಹೆಗಿಂತಲೂ ಮೀರಿಸಿದ ಘನಪದಾರ್ಥ ಮತ್ತೊಂದು........”

“ಇದೆ ಮಹಾಸ್ವಾಮಿ.”

“ಇದೆಯೇ? ಯಾವುದು ಶೇಷಯ್ಯಾ?”

“ಊಟ ಮಹಾಸ್ವಾಮಿ.”

“ಹಾಗಾದರೆ ಉಪಕ್ರಮಿಸೋಣ, ನಡೆ.”



# ತಿಷ್ಯ ರಕ್ಷಿತೆ

**ವಿ. ಬಿ. ಈಶ್ವರರಾವ್**



## ಪತ್ರಿಕಾಭಿಪ್ರಾಯ :

"ತಿಷ್ಯ ರಕ್ಷಿತೆ" ಅಶೋಕನ ಮೂರನೆಯ ರಾಣಿ ತಿಷ್ಯರಕ್ಷಿತೆಯ ಕತೆ, ಅಶೋಕನ ಯೌವನ ವಸಂತವು ಮಾಯವಾದ ಮೇಲೆ ಇನ್ನೂ ಯೌವನದ ಹೊಸ್ತಿಲಲ್ಲಿ ಕಾಲಿಟ್ಟ ತಿಷ್ಯ ರಕ್ಷಿತೆಯ ವೇದನೆಯ ದೃಶ್ಯ. "ತಿಷ್ಯ ರಕ್ಷಿತೆ" ನಿಜವಾಗಿ ಅಮೋಘವಾದ ಕೃತಿ. ........ತಿಷ್ಯ ರಕ್ಷಿತೆಯ ಪಾತ್ರ ಸೊಗಸಾಗಿದೆ.

"ಬೀಳ್ಕೊಡಿಕೆ" ಗೌತಮನು ಸತ್ಯಾನ್ವೇಷಣೆಗೆ ಕಪಿಲವಸ್ತುವಿನಿಂದ ಹೊರಟ ದೃಶ್ಯ. ಗೌತಮ - ಚನ್ನ ಇಬ್ಬರ ಅಗಲಿಕೆಯ ದೃಶ್ಯ. ಗೌತಮನ ಪಾತ್ರ ಗಂಭೀರವಾಗಿದೆ, ಅವನ ಬಾಯಿಂದ ಬರುವ ಮಾತುಗಳು ಅಮೃತಧಾರೆಯಾಗಿವೆ.

ಶ್ರೀ ಈಶ್ವರರಾವ್ ಅವರ ಶೈಲಿ ಸವಿಯಾದ ಶೈಲಿ. ಅವರ ಲೇಖನಿ ಹಾಸ್ಯಕ್ಕೆ, ಗಾಂಭೀರ್ಯಕ್ಕೆ, ಶೋಕಕ್ಕೆ, ಭಾವಾವೇಶಕ್ಕೆ, ಕಟಕಿಗೆ ಹೊಂದಿಕೊಳ್ಳಬಲ್ಲುದು. ಅವರು ಇನ್ನೂ ಹಲವು ಉತ್ತಮ ಕೃತಿಗಳನ್ನು ಅನುವಾದಮಾಡಿ, ಕನ್ನಡ ಸಾಹಿತ್ಯ ಸಿರಿಯನ್ನು ಹೆಚ್ಚಿಸಲೆಂದು ಆಶಿಸುತ್ತೇವೆ. —ಎಲ್.ಎಸ್.ಎಸ್.ಆರ್. (ಕತೆಗಾರ)

"ತಿಷ್ಯ ರಕ್ಷಿತೆ" ಅಶೋಕನ ಮೂರನೆಯ ಹೆಂಡತಿ. ಉದಯೋನ್ಮುಖ ಯೌವನದ ಈ ಸುಕುಮಾರಿಯನ್ನು ರಾಜ್ಯವಿಸ್ತಾರದೃಷ್ಟಿಯಿಂದ ಇಳಿವಯಸ್ಸಿನ ಅಶೋಕ ವರಿಸುತ್ತಾನೆ. ಬಾಳಿನ ಚೆಲುವನ್ನು ಸವಿಯಲಾತುರಳಾಗಿರುವ ಈಕೆಗೆ ಅಶೋಕನ ಅಧ್ಯಾತ್ಮ ಪ್ರವೃತ್ತಿ, ಬೋಧಿವೃಕ್ಷ ಪೂಜೆ, ಶಿಲಾರಾಧನೆಗಳು ಗೋಳೆನಿಸುವುವು. ಅಶೋಕನ ತಮ್ಮ ಮಹೇಂದ್ರನಿಗೂ, ಮಗ ಕುನಾಲನಿಗೂ ಪ್ರೇಮಜಾಲ ಹರಡುವಳು. ಅದೂ ಯಶಸ್ವಿಯಾಗುವುದಿಲ್ಲ, ಅವಳ ಹೃದಯ ಭಗ್ನವಾಗುತ್ತದೆ. ಬೋಧಿವೃಕ್ಷವನ್ನು ಕಡಿಯುವ ಸನ್ನಾಹದಲ್ಲಿ ಸಿಕ್ಕಿಬಿದ್ದು ಮರಣದಂಡನೆಯ ತೀರ್ಪಿಗೆ ಒಳಪಡುತ್ತಾಳೆ. ಆದರೆ ತನ್ನಲ್ಲೆ ತನ್ನ ಮತ ಐಕ್ಯವಾಗಲೆಂಬ ದೃಷ್ಟಿಯಿಂದ ಒಂದು ಸ್ತಂಭವನು ಒದ್ದು ಅದರಡಿಯಲ್ಲಿ ಸಿಕ್ಕಿ ಸಾಯುತ್ತಾಳೆ.

ಹಳೆಯ ವಸ್ತುವಾದರೂ ಇದನ್ನು ಹೊಸ ದೃಷ್ಟಿಯಿಂದ ನೋಡಿದೆ. ಪ್ರೇಮ, ಮತ, ವಿಗ್ರಹಾರಾಧನೆ ಇತ್ಯಾದಿ ಸಮಸ್ಯೆಗಳನ್ನು ಸೂಕ್ಷ್ಮವಾಗಿ ಬಿಡಿಸಲು ಪ್ರಯತ್ನಿಸಿದೆ.

"ಬೀಳ್ಕೊಡಿಕೆ"ಯಲ್ಲಿ ಗೌತಮನು ಲೋಕಾಚಾರಗಳನ್ನು ಪರಿತ್ಯಜಿಸುವುದು ವಸ್ತು. ಇದೊಂದು ದ್ವಿಪಾತ್ರ-ಏಕಾಂಕ. ಹೆಚ್ಚು ಪಾತ್ರಗಳ[illegible]ಂಬದೆ ಹೇಳಬೇಕಾದ್ದನ್ನೆಲ್ಲವನ್ನೂ ಹೇಳಿದೆ. —ಸ್ವತಂತ್ರ.

[illegible] ಪ್ರೆಸ್, ಬೆಂಗಳೂರು ೨